ಪ್ರಚಾರ ಪುಸ್ತಕ ಮಾಲೆ – ೧೪೦

# ಜನ್ನ

ಡಾ. ಸಿ. ಪಿ. ಕೃಷ್ಣಕುಮಾರ್




೨೦೦೧

## ಪ್ರಚಾರ ಪುಸ್ತಕ ಮಾಲೆಯ ಇತರ ಕೆಲವು ಪ್ರಕಟಣೆಗಳು

೧. ಕುಮಾರವ್ಯಾಸ – ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ – ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ – ಕೆ. ವೆಂಕಟರಾಮಪ್ಪ
೪. ಪಂಪ – ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ – ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು – ಎಸ್. ರಾಮಚಂದ್ರರಾವ್
೭. ಭಾಸ – ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ – ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು – ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ – ಎಸ್. ವಿ. ಪರಮೇಶ್ವರಭಟ್
೧೧. ಕುಮಾರವ್ಯಾಸ ವಾಣಿ – ಎಸ್. ವಿ. ರಂಗಣ್ಣ
೧೨. ನಯಸೇನ – ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು – ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ – ಎನ್. ಅನಂತರಂಗಾಚಾರ್
೧೫. ಮುದ್ದಣ – ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು – ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ – ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ – ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ – ಎನ್. ಅನಂತರಂಗಾಚಾರ್
೨೦. ಶ್ರೀನಾಥ – ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ – ದೇ. ಜವರೇಗೌಡ
೨೨. ಚಿತ್ರಾಂಗದಾ – ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ – ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ – ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ – ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ – ಡಾ. ಹಿರಣ್ಮಯ
೨೭. ವೇಮನ – ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ – ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು – ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ

ಪ್ರಚಾರ ಪುಸ್ತಕಮಾಲೆ-೧೪೦

# ಜನ್ನ

ಡಾ. ಸಿ. ಪಿ. ಕೃಷ್ಣಕುಮಾರ್




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೨೦೦೧

ಮೊದಲನೆಯ ಮುದ್ರಣ : ೧೯೬೫
ಎರಡನೆಯ ಮುದ್ರಣ : ೧೯೭೧
ಮೂರನೆಯ ಮುದ್ರಣ : ೨೦೦೧



ಬೆಲೆ : ರೂ. ೧೦-೦೦

ಪ್ರಕಾಶಕರು
ಪ್ರೊ. ಲಕ್ಷ್ಮೀನಾರಾಯಣ ಅರೋರಾ
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು
ಡಾ. ಕೃಷ್ಣೇಗೌಡ
ನಿರ್ದೇಶಕರು, ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ
ಮೈಸೂರು-೬

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ ಮೊದಲನೆಯ 'ಕಾನ್ವೋಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣ ವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿ ಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹ ದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕ ವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆ ಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳಿವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವು ದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟು ಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವವಿದ್ಯಾನಿಲಯದ ವಿದ್ಯೆಯ

ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೇ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನ ವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ ವಿಷಯಗಳನ್ನು ಕುರಿತ ನೂರಮೂವತ್ತೊಂಬತ್ತು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗುತ್ತದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ, ಡಾ. ಸಿ.ಪಿ. ಕೃಷ್ಣಕುಮಾರ್, ಅವರ 'ಜನ್ನ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು ಕೆ. ಎಲ್. ಶ್ರೀಮಾಲಿ
೧೮-೧೧-೧೯೬೫ ವೈಸ್ ಛಾನ್ಸಲರ್

# ಮೂರನೆಯ ಮುದ್ರಣಕ್ಕೆ ಮುನ್ನುಡಿ

ಪ್ರಚಾರ ಪುಸ್ತಕ ಮಾಲೆಯಲ್ಲಿ ಮೂರನೆಯ ಮುದ್ರಣವನ್ನು ಕಾಣುತ್ತಿರುವ ಡಾ. ಸಿ.ಪಿ. ಕೃಷ್ಣಕುಮಾರ್ ಅವರ 'ಜನ್ನ' ಅತ್ಯಂತ ಜನಪ್ರಿಯವಾಗಿರುವ ನಮ್ಮ ಕಿರುಹೊತ್ತಗೆಗಳಲ್ಲಿ ಒಂದು. ಈಗಾಗಲೇ ಪ್ರಚಾರಪುಸ್ತಕ ಮಾಲೆಯಲ್ಲಿ ಹೊರಬಂದಿರುವ ಪುಸ್ತಕಗಳ ಸಂಖ್ಯೆ ೨೭೦ಳಕ್ಕೂ ಮೀರಿದ್ದು ಹಲವಾರು ಬಗೆಯ ವಿಷಯಗಳನ್ನು ಕುರಿತಂತೆ ಆಸಕ್ತ ಜನರಿಗೆ ಸಾಮಗ್ರಿ ಒದಗಿಸಿ ಅವರ ಜಿಜ್ಞಾಸೆಯನ್ನು ತಣಿಸುವ ದಿಕ್ಕಿನಲ್ಲಿ ಇವು ಯಶಸ್ವಿಯಾಗಿವೆ. ಈ ಪುಸ್ತಕಕ್ಕಾಗಿ ಅಕ್ಷರವಿನ್ಯಾಸ ಮಾಡಿಕೊಟ್ಟ ಸಮೀರ ಪ್ರಿಂಟರ್ಸ್, ಚಾಮರಾಜಪುರಂ, ಮೈಸೂರು ಇವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ. ಈ ಕಿರುಹೊತ್ತಗೆಯನ್ನು ಓದುಗರು ಪ್ರೀತಿಯಿಂದ ಸ್ವಾಗತಿಸುತ್ತಾರೆಂದು ಭಾವಿಸುತ್ತೇನೆ.

ಪ್ರೊ. ಲಕ್ಷ್ಮೀನಾರಾಯಣ ಅರೋರಾ

# ಅರಿಕೆ

ಕುಣಿಗಲ್, ದೇವರಾಯಸಮುದ್ರ ಮತ್ತು ದಕ್ಷಿಣ ಕೊಡಗಿನ ನಾಪೊಕ್ಲುವಿನಲ್ಲಿ ಜನ್ನನ ಕೃತಿಗಳನ್ನು ಕುರಿತು ನಾನು ಮಾಡಿದ ಪ್ರಚಾರೋಪನ್ಯಾಸಗಳು ಈ ಪುಸ್ತಿಕೆಗೆ ಪ್ರೇರಕ. ಆದಷ್ಟುಮಟ್ಟಿಗೆ ಕವಿಯ ಮಾತುಗಳಲ್ಲೇ ಅವನ ಕಾವ್ಯಗಳನ್ನು ಪರಿಚಯ ಮಾಡಿಕೊಡಲು ಉದ್ದೇಶಿಸಿದ್ದೇನೆ. ಆಯಾ ಕೃತಿಯ ಸ್ಥೂಲ ವಿಮರ್ಶೆಗೂ ಇಲ್ಲಿ ಎಡೆಯಿದೆ. ಉದಾಹೃತ ಪದ್ಯ ಭಾಗಗಳಲ್ಲಿ ಶಕ್ಯವಾದ ಮಟ್ಟಿಗೆ ಸಂಧಿ ಬಿಡಿಸಿ, ವಿರಾಮ ಚಿಹ್ನೆಗಳನ್ನು ಹಾಕಲಾಗಿದೆ. ಒಟ್ಟಿನಲ್ಲಿ ಸಾಮಾನ್ಯ ವಾಚಕರನ್ನು ದೃಷ್ಟಿಯಲ್ಲಿರಿಸಿಕೊಂಡು ಬರೆದ ಪುಸ್ತಿಕೆಯಿದು.

ಇದನ್ನು ಪ್ರಕಟಿಸಿರುವ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಅಧಿಕಾರಿಗಳಿಗೂ, ಅಂದವಾಗಿ ಅಚ್ಚುಹಾಕಿರುವ ಶ್ರೀ ಪಂಚಾಚಾರ್ಯ ಮುದ್ರಣಾಲಯದವರಿಗೂ ನಾನು ಕೃತಜ್ಞ.

ಮಹಾರಾಜ ಕಾಲೇಜು
ಮೈಸೂರು

**ಸಿ.ಪಿ.ಕೆ.**

## ದ್ವಿತೀಯ ಮುದ್ರಣವನ್ನು ಕುರಿತು

'ಜನ್ನ' ಪುಸ್ತಿಕೆಯ ದ್ವಿತೀಯ ಆವೃತ್ತಿಯನ್ನು ಹೊರತಂದಿರುವ ಪ್ರಸಾರಾಂಗದ ಅಧಿಕಾರಿಗಳಿಗೂ, ಇದನ್ನು ಮುದ್ರಿಸಿ ಕೊಟ್ಟಿರುವ ಶ್ರೀರಾಜೇಶ್ವರಿ ಮುದ್ರಣಾಲಯದವರಿಗೂ ನನ್ನ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು

**ಸಿ. ಪಿ. ಕೆ.**

## ತೃತೀಯ ಮುದ್ರಣವನ್ನು ಕುರಿತು

ಈಚಿನ ಸಂಶೋಧನೆಯ ಬೆಳಕಿನಲ್ಲಿ ಜನ್ನನ ಇತಿವೃತ್ತದಲ್ಲಿ ಈ ತಿದ್ದುಪಡಿಗಳಾಗಬೇಕು : ಕವಿಯ ತಂದೆ ಶಂಕರ, ಗುರು ಸುಮನೋಬಾಣ (ನಾಗವರ್ಮನಲ್ಲ); ಇಬ್ಬರೂ ಬೇರೆ ಬೇರೆ ವ್ಯಕ್ತಿಗಳು. ಮಲ್ಲಿಕಾರ್ಜುನ, ಕೇಶಿರಾಜರಿಗೂ ಜನ್ನನಿಗೂ ಯಾವುದೇ ಸಂಬಂಧವಿಲ್ಲ.

ಈ ಪುಸ್ತಿಕೆಯನ್ನು ಪ್ರಕಟಿಸುತ್ತಿರುವ ಪ್ರಸಾರಾಂಗದ ಅಧಿಕಾರಿಗಳಿಗೂ ಮುದ್ರಿಸಿರುವ ಸಮೀರ ಪ್ರಿಂಟರ್ಸ್‌ನವರಿಗೂ ನನ್ನ ನಮಸ್ಕಾರ.

**ಸಿ. ಪಿ. ಕೆ.**

## ವಿಷಯ ಸೂಚಿಕೆ

# ೧. ಕವಿ ಪರಿಚಯ

ಕನ್ನಡದ ಸುಪ್ರಸಿದ್ಧ ಕವಿಯಾದ ಜನ್ನ, ಇತರ ಎಷ್ಟೋ ಮಂದಿ ಕವಿಗಳಂತಲ್ಲದೆ ಸ್ವಕೀಯ ವೃತ್ತಾಂತವನ್ನು ತನ್ನ ಕೃತಿಗಳಲ್ಲಿ ತಕ್ಕಮಟ್ಟಿಗೆ ಹೇಳಿಕೊಂಡಿದ್ದಾನೆ. ಅವನ ಕಾಲ ಜೀವನ ವ್ಯಕ್ತಿತ್ವಗಳನ್ನು ಕುರಿತು ಕೆಲವು ಸಂಗತಿಗಳು ಇದರಿಂದ ನಿಚ್ಚಳವಾಗಿ ತಿಳಿದುಬರುತ್ತವೆ.

ಜನ್ನ ಎಂಬುದು ಜನಾರ್ದನ ಎಂಬ ಹೆಸರಿನ ಸಂಕ್ಷಿಪ್ತರೂಪ. ಜನ್ನಿಗ, ಜನ್ನಯ್ಯ, ಜಾನಕಿ, ಜನ್ನಮರಸ ಮುಂತಾದ ಹೆಸರುಗಳಿಂದಲೂ ಈ ಕವಿ ತನ್ನನ್ನು ಕರೆದುಕೊಂಡಿದ್ದಾನೆ. ಜೈನಧರ್ಮೀಯನಾದ ಜನ್ನನದು ಕಮ್ಮೆವಂಶ, ಕಾಶ್ಯಪಗೋತ್ರ. ಇವನ ತಂದೆ ಸುಮನೋಬಾಣನೆಂಬ ಬಿರುದು ಪಡೆದಿದ್ದ ಶಂಕರ; ಕವಿಯೂ, ಹೊಯ್ಸಳ ನರಸಿಂಹನಲ್ಲಿ (ಕ್ರಿ.ಶ. ೧೧೪೧-೭೩) ಕಟಕೋಪಾಧ್ಯಾಯನೂ ಆಗಿದ್ದವನು. ಜನ್ನನ ತಾಯಿ ಗಂಗಾದೇವಿ, ಹೆಂಡತಿ ಲಕುಮಾದೇವಿ. ಕಾಣೂರ್ಗಣದ ಮಾಧವ ಚಂದ್ರ ಶಿಷ್ಯನಾದ ಗಂಡವಿಮುಕ್ತ ರಾಮಚಂದ್ರದೇವಮುನಿ ಈತನ ಧಾರ್ಮಿಕ ಗುರು; ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿದ್ದ ಅಭಿನವ ಶರ್ವವರ್ಮನೆಂಬ ಬಿರುದಿನ ಎರಡನೆಯ ನಾಗವರ್ಮ ಇವನಿಗೆ ಉಪಾಧ್ಯಾಯ. 'ಸೂಕ್ತಿ ಸುಧಾರ್ಣವ'ವನ್ನು ಸಂಕಲಿಸಿದ ಮಲ್ಲಿಕಾರ್ಜುನ ಜನ್ನನ ಸೋದರಿಯ ಗಂಡ; ಅವನ ಮಗನೂ 'ಶಬ್ದಮಣಿದರ್ಪಣ'ದ ಕರ್ತೃವೂ ಆದ ಕೇಶಿರಾಜ ಜನ್ನನ ಸೋದರಳಿಯ. ಹೀಗೆ ವಿದ್ವತ್ಪರಿಪೂರ್ಣವಾದ ಮನೆತನದಲ್ಲಿ ಹುಟ್ಟಿ ಸಾರಸ್ವತ ಪರಿಸರದಲ್ಲಿ ಬೆಳೆದ ಜನ್ನನಲ್ಲಿ ಪಾಂಡಿತ್ಯ, ಕವಿತಾಶಕ್ತಿಗಳು ಸಹಜವಾಗಿ ನೆಲೆಗೊಂಡುದರಲ್ಲಿ ಆಶ್ಚರ್ಯವಿಲ್ಲ.

ಜನ್ನ ಹುಟ್ಟಿದ್ದು ಆಷಾಢ ಕೃಷ್ಣ ತ್ರಯೋದಶಿ ರೇವತೀ ನಕ್ಷತ್ರ ಶಿವಯೋಗದಲ್ಲಿ. ಆದರೆ ಅದು ಯಾವ ವರ್ಷವೆಂಬುದು ಗೊತ್ತಾಗು

ವುದಿಲ್ಲ. ಜನ್ನನ ಶಾಸನಗಳ ಮತ್ತು ಕಾವ್ಯಗಳ ರಚನೆಯ ಕಾಲದಿಂದ ನಾವು ಅವನ ಜೀವಿತಕಾಲವನ್ನು ಊಹಿಸಬೇಕಾಗುತ್ತದೆ. ಕ್ರಿ.ಶ. ೧೧೯೧ರಲ್ಲಿ ರಚಿತವಾದ ಚೆನ್ನರಾಯಪಟ್ಟಣದ ೧೭೯ನೆಯ ಶಾಸನವನ್ನೂ ಕ್ರಿ.ಶ. ೧೧೯೭ರಲ್ಲಿ ಹುಟ್ಟಿದ ತರೀಕೆರೆಯ ೪೫ನೆಯ ಶಾಸನವನ್ನೂ ಜನ್ನ ಬರೆದನೆಂಬುದು ಆ ಶಾಸನಗಳ ಕಡೆಯಲ್ಲಿರುವ 'ಜನ್ನಯ್ಯನ ಕವಿತೆ' ಮತ್ತು 'ಉದ್ದಂಡ ಕವಿಭಾಳನೇತ್ರಂ ಸುಕವಿಜನಮಿತ್ರಂ ಜನ್ನಯ್ಯನ ಕವಿತೆ' ಎಂಬ ವಾಕ್ಯಗಳಿಂದ ತಿಳಿದುಬರುತ್ತದೆ. 'ಯಶೋಧರ ಚರಿತೆ'ಯನ್ನು ವೀರಬಲ್ಲಾಳನ (ಕ್ರಿ.ಶ. ೧೧೭೩-೧೨೨೦) ಆಳ್ವಿಕೆಯಲ್ಲಿ ಕ್ರಿ.ಶ. ೧೨೦೯ರಲ್ಲಿ ಬರೆದುದಾಗಿಯೂ 'ಅನಂತನಾಥ ಪುರಾಣ'ವನ್ನು ವೀರ ಬಲ್ಲಾಳನ ಮಗ ನರಸಿಂಹನ ಆಳ್ವಿಕೆಯಲ್ಲಿ ಕ್ರಿ.ಶ. ೧೨೩೦ರಲ್ಲಿ ಬರೆದುದಾಗಿಯೂ ಕವಿಯೇ ಹೇಳಿಕೊಂಡಿದ್ದಾನೆ. ಆದ್ದರಿಂದ, ಕ್ರಿ.ಶ. ೧೧೯೧ರಲ್ಲಿ ಜನ್ನನ ಕವಿತಾರಚನೆ ಪ್ರಾರಂಭವಾಗಿ ಕ್ರಿ.ಶ. ೧೨೩೦ರವರೆಗೂ ಸಾಗಿರಬೇಕು; ಮೊದಲು ಶಾಸನಗಳನ್ನು ಬರೆದು ಅವನು ತನ್ನ ಕೈ ಪಳಗಿಸಿಕೊಂಡಿರಬೇಕು. ಒಟ್ಟಿನಲ್ಲಿ, ಅವನ ಕಾಲ ೧೨ನೆಯ ಶತಮಾನದ ಉತ್ತರಾರ್ಧ ಮತ್ತು ೧೩ನೆಯ ಶತಮಾನದ ಪೂರ್ವಾರ್ಧದಲ್ಲಿ ಬೀಳುತ್ತದೆ ಎಂದಿಟ್ಟುಕೊಳ್ಳಬಹುದು.

ಜನ್ನನ ಸ್ಥಳ ಯಾವುದೆಂಬುದು ನಿರ್ದಿಷ್ಟವಾಗಿ ತಿಳಿಯದು. ಅವನು ಹೊಯ್ಸಳ ಬಲ್ಲಾಳನಿಂದ 'ಕವಿಚಕ್ರವರ್ತಿ' ಬಿರುದನ್ನು ಪಡೆದು, ಅನಂತರ ನರಸಿಂಹನಲ್ಲಿ ಆಸ್ಥಾನಕವಿಯೂ ದಂಡಾಧಿಪತಿಯೂ ಮಂತ್ರಿಯೂ ಆಗಿದ್ದನಂತೆ. ಅವನ ಶಾಸನಗಳೆಲ್ಲ ಚೆನ್ನರಾಯಪಟ್ಟಣ ಮತ್ತು ತರೀಕೆರೆ ಪ್ರಾಂತಗಳಲ್ಲಿ ಸಿಕ್ಕಿವೆ. ಆದ್ದರಿಂದ ಈ ಕವಿ ಹಳೆಯಬೀಡು ಪ್ರಾಂತದವನೆಂದು ನಿರ್ಧರಿಸಬಹುದು.

ಆದಿಕವಿ ಪಂಪನಂತೆ ಜನ್ನ ಕವಿಯೂ ಕಲಿಯೂ ಆಗಿದ್ದು, ಬಹುಮುಖಿ ವ್ಯಕ್ತಿತ್ವ ಹೊಂದಿದ್ದನೆಂದು ಕಾಣುತ್ತದೆ. ಆತ ತನ್ನನ್ನು

'ನಾಟ್ಯಾಭು ಜನಾರ್ದನದೇವ' ಎಂದು ಕರೆದುಕೊಂಡಿದ್ದಾನೆ. ಅಷ್ಟೇ ಅಲ್ಲ, "ನರಸಿಂಹ ಚೋಳ ಕುಲೋದ್ಧರಣನ ಸರ್ವಜ್ಞಭೂಪನ ಓಲಗದೊಳ್ ನಿಂದಿರೆ ದಂಡಾಧೀಶಂ, ಕುಳ್ಳಿರೆ ಮಂತ್ರಿ, ತೊಡಂಕೆ ಕವಿ ಜನಾರ್ದನ ದೇವಂ" ಎಂದು ತನ್ನ ತ್ರಿಮುಖ ಶಕ್ತಿಯನ್ನು ಸೊಗಸಾಗಿ ಹೇಳಿಕೊಂಡಿದ್ದಾನೆ.

ಕುಲ, ರೂಪ, ವಿದ್ಯೆ, ಪದವಿ, ಧನ, ಕೀರ್ತಿ-ಯಾವುದರಲ್ಲೂ ಜನ್ನನಿಗೆ ಕೊರತೆಯಿರಲಿಲ್ಲ. ಧರ್ಮಾವಿರುದ್ಧವಾದ ತುಂಬುಬಾಳನ್ನು ಬಾಳಿದ ರಸಿಕ ಚಕ್ರಿಯವನು.; ಇಹಪರಗಳ ಉಚಿತ ಸಮನ್ವಯ ಅವನ ಜೀವನದಲ್ಲಿ ಸಿದ್ಧಿಸಿರಬೇಕು. 'ಸೊಬಗಿನ ಜಂಗಮಶಾಸನನ್', 'ಸೊಬಗಿನಭಿನವಮದನನ್' ಎಂಬ ಮಾತುಗಳಿಂದ ಜನ್ನ ತನ್ನ ಮೆಯ್ಸಿರಿಯನ್ನು ಪ್ರಕಟಿಸಿದ್ದಾನೆ; 'ಭರತ ಸುರತ ಶಾಸ್ತ್ರವಿಳಾಸನ್' ಎಂದು ತನ್ನನ್ನು ಕರೆದುಕೊಂಡು ತನ್ನ ಶೃಂಗಾರ ಪ್ರಿಯತೆಯನ್ನು ವ್ಯಕ್ತಪಡಿಸಿದ್ದಾನೆ. ಆದರೆ ಜನ್ನನ ಭೋಗಭಾಗ್ಯಗಳು ಅವನ ಪಾರಮಾರ್ಥಿಕ ಆಸಕ್ತಿಗೆ, ಜಿನಭಕ್ತಿಗೆ ಆತಂಕವಾಗಿರಲಿಲ್ಲ. ಅವನು ಕೊಡುಗಯ್ಯ ಉದಾರಿಯಾಗಿದ್ದ. "ಜಗದೊಳ್ ತಾನಿತ್ತ ಕಯ್ಯಲ್ಲದೆ ಒಡ್ಡಿದ ಕಯ್ಯಲ್ಲದ ಪೆಂಪು" ಎಂದು ಹೆಮ್ಮೆಯಿಂದ ತನ್ನ ದಾನಗುಣವನ್ನು ಹೇಳಿಕೊಂಡಿದ್ದಾನೆ. ಅವನು ಗಂಡರಾದಿತ್ಯನ ಪುರವಾದ ಕಿಲಕಿಲ ದುರ್ಗದಲ್ಲಿ ಅನಂತನಾಥನ ಬಸದಿಯನ್ನು ಕಟ್ಟಿಸಿ, ದ್ವಾರಸಮುದ್ರದಲ್ಲಿ ವಿಜಯಪಾರ್ಶ್ವ ಜಿನೇಶ್ವರನ ಬಸದಿಯ ದ್ವಾರವನ್ನು ಮಾಡಿಸಿದನಂತೆ.

ಜನ್ನನಲ್ಲಿ ಗಾಢವಾದ ಆತ್ಮಪ್ರತ್ಯಯವನ್ನು ಕಾಣುತ್ತೇವೆ.ಅವನಿಗೆ ತನ್ನ ಕವಿತೆಯ ಅಗ್ಗಳಿಕೆಯ ಬಗ್ಗೆ ಬಹಳ ಹೆಮ್ಮೆ. ರನ್ನ ಪೊನ್ನರಂತೆ ತಾನೂ ಕವಿಚಕ್ರವರ್ತಿ ಎಂಬುದನ್ನವನು ಅಭಿಮಾನಪೂರ್ವಕವಾಗಿ ಒತ್ತಿಹೇಳಿದ್ದಾನೆ. "ಈ ಜನಾರ್ದನನ ವಕ್ತ್ರಾಂಭೋಜಮನ್ ಸಾರ್ದು ಸುಸ್ಥಿತೆಯಾಗಿರ್ದುದಱಿಂದೆ ತಾನ್ ಸೊಬಗೆಯಾದಳ್ ಜಾಣೆಯಾದಳ್

ಸರಸ್ವತಿ ವಿಶ್ವಭೂಚಕ್ರದೊಳ್" ಎಂಬುದು ಅವನ ಪ್ರತಿಷ್ಠೆ. "ರನ್ನನ್ ವೈಯಾಕರಣನ್, ಜನ್ನನ್ ಮೇಣ್ ಕವಿಗಳೊಳಗೆ ವೈಯಾಕರಣನ್; ಪೊನ್ನನ್ ಅಸಹಾಯ ಕವಿ, ಮೇಣ್ ಜನ್ನಿಗನ್ ಅಸಹಾಯ ಸುಕವಿ ಕವಿಚಕ್ರಿಗಳೊಳ್" ಎಂದು ಚಮತ್ಕಾರದಿಂದ ಅವನು ತನ್ನ ಸಾಮರ್ಥ್ಯ ವನ್ನು ಹೊಗಳಿಕೊಂಡಿದ್ದಾನೆ. ಕವಿಚಕ್ರವರ್ತಿ ಎಂಬ ಬಿರುದನ್ನು ಮಾತ್ರ ವಲ್ಲದೆ, ಸಾಹಿತ್ಯರತ್ನಾಕರ, ಕವಿ ಭಾಳಲೋಚನ, ಮಾನವಮೇರು, ವಿನೇಯಜನಮುಖತಿಲಕ, ರಾಜವಿದ್ವತ್ಸಭಾಕಲಹಂಸ, ಕಲ್ಪಲತಾ ಮಂದಾರ ಮುಂತಾದ ಬಗೆಬಗೆಯ ವಿಶೇಷಣಗಳನ್ನು ಹಚ್ಚಿಕೊಂಡಿದ್ದಾನೆ ಜನ್ನ. ಈ ತೆರನಾದ ಆತ್ಮಪ್ರಶಂಸೆ, ಕುಕವಿನಿಂದೆ ಮುಂತಾದುವೆಲ್ಲ ನಮ್ಮ ಹಿಂದಿನ ಕವಿಗಳ ಸಂಪ್ರದಾಯವೆಂಬುದನ್ನು ಗಮನಿಸಿದರೆ, "ಜನಾರ್ದನಂ ಸುಕವಿವಲ್ಲಭನಾತನ ಮುಂದೆ ಗಣ್ಯರೇ ಚಂದದ ಬಳ್ಳಿ ಸಂಕಲೆ ಯೊಳಕ್ಕರಮಂ ಸೆಜೆಗೆಯ್ವ ಕಕ್ಕಸರ್ ?" ಎಂಬ ಜನ್ನನ ಮೇರೆಮೀರಿದ ಆತ್ಮಸ್ತುತಿ ಕ್ಷಮ್ಯವೆನಿಸುತ್ತದೆ. ಪದ್ಧತಿಯಂತೆ, ಗುಣವರ್ಮ, ಪಂಪ, ಪೊನ್ನ, ನಾಗವರ್ಮ, ನಾಗಚಂದ್ರ, ಅಗ್ಗಳ, ನೇಮಿಚಂದ್ರ, ಪುಷ್ಪಬಾಣ- ಈ ಪೂರ್ವಕವಿಗಳನ್ನು ಜನ್ನ ನೆನೆದಿದ್ದಾನೆ.

ಕವಿಕಾವ್ಯಮೀಮಾಂಸೆಗೆ ಸಂಬಂಧಿಸಿದ ಕೆಲವು ಒಳ್ಳೆಯ ಮಾತು ಗಳು ಜನ್ನನಲ್ಲಿ ಸಿಗುತ್ತವೆ. ಕವಿಗಿರಬೇಕಾದ ಯೋಗ್ಯತೆ, ಸತ್ಕಾವ್ಯದ ಸ್ವರೂಪ, ಕಾವ್ಯಶಕ್ತಿಯ ಮಹಿಮೆ ಮುಂತಾದ ವಿಷಯಗಳನ್ನು ಅವನು ಪ್ರಸ್ತಾಪಿಸಿದ್ದಾನೆ. ಕವಿಯಾದವನು 'ರಸಸಂವೃತ್ತಜ್ಞನೂ ವಿವಿಧ ಕಳಾ ಭಿಜ್ಞನೂ ಆಗಮಜ್ಞನೂ' ಆಗಿರಬೇಕು; ಅಂತಹ ಕವಿ ಹೇಳುವ ಕಾವ್ಯ 'ಅಖಿಳ ಶ್ಲಾಘ್ಯ.' 'ಪದವೃತ್ತಜ್ಞತೆ, ಬಹುಕಾವ್ಯಾನುಭವ, ಕಳಾಪ್ರತಿಭೆ, ಲೋಕಜ್ಞತೆ'–ಇತ್ಯಾದಿಗಳು ಕವಿತಾಪರಿಕರಗಳು, "ಇಂತಿವು ಇಲ್ಲದಿರ್ದ ಕವಿಗಳ್ ಕಾವ್ಯಂಗಳಂ ಮಾಡುವ ಆಗ್ರಹಮಂ ಮಾಡಿದೊಡೆ, ಆ ಗ್ರಹಂ ಪೊಡೆದವೊಲ್ ಬೆಂಡಾಗಿ ಬೀಳಾಗರೇ ?" ಕಾವ್ಯದಲ್ಲಿ 'ಸಮುದಾಯ

ಶೋಭೆ' ಇರಬೇಕು; 'ಚಂದನ ಪಂಕದೊಳ್ ಪರಿಮಳಂ ಮೆಚೆವಂತಿರೆ' ರಸಸ್ಯಂದಿಯಾದ ಮಾತುಗಳು ಶೋಭಿಸಬೇಕು ಎನ್ನುವುದು ಜನ್ನನ ಅಭಿಮತ. 'ವಾಕ್ಯಾರ್ಥದಿಂ ಧ್ವನಿ ಬೇಱಿರ್ದೆಸೆವಂತೆ' ಎಂದು ಅವನು ಒಂದು ಸಂದರ್ಭದಲ್ಲಿ ತನ್ನ ಧ್ವನಿಪರಿಜ್ಞಾನವನ್ನು ಸೂಚಿಸಿರುವುದು ಗಮನಾರ್ಹವಾಗಿದೆ.

ಕವಿತಾಶಕ್ತಿಯೆನ್ನುವುದು ಕಾಮಧೇನುವಿಗೆ ಸಮಾನ, ಅದು ಸದ್ವಿನಿಯೋಗವಾಗಬೇಕು-ಎಂಬುದು ಜನ್ನನ ಆಶಯ. "ಕವಿತಾಶಕ್ತಿ ಸುರೇಂದ್ರಧೇನು, ಅದು ಪುಣ್ಯಾಯತ್ತಂ." ಅದು ಸಾರ್ಥಕವಾಗುವಂತೆ, 'ಬಾಳಬಟ್ಟೆ ಪರಮಾಗಮಂ' ಎನಿಸುವಂತಹ ಕೃತಿಗಳನ್ನು ರಚಿಸಬೇಕು.

ಕಾವ್ಯವನ್ನೋದುವ ಸಹೃದಯನಿಗೆ ಜನ್ನ ಪ್ರಾಧಾನ್ಯ ಕೊಟ್ಟಿದ್ದಾನೆ. ಕವಿಯ ಹೃದಯದಿಂದ ಹೊರಟ ಕಾವ್ಯ ಓದುಗನ ಹೃದಯವನ್ನು ತಲುಪಿದಾಗಲೆ ಅದರ ಸಾರ್ಥಕ್ಯ. ಕವಿತೆಯನ್ನೋದಿ ಮೆಚ್ಚುವವರಿಲ್ಲದೆ ಹೋದರೆ ಅದನ್ನು ಬರೆದೇನು ಪ್ರಯೋಜನ ಎಂದು ಕೇಳುವ ಈ ಪದ್ಯ ಪ್ರಸಿದ್ಧವಾಗಿದೆ :

ಎನಿತನೊಜಿಲ್ದು ಪೇೞ್ದೊ ಕವಿ ಏವನ್ ? ಪೆಸರಿಟ್ಟು ಮೆಚ್ಚಬ
ಲ್ಲನನ್ ಅಱಿಸಲ್ಕೆವೇೞ್ಪುದು, ಅವನಂ ಜಗದೊಳ್ ಪಡೆಯಲ್ಕೆಬಾರದು, ಆ
ತನ ಮುಖದಿಂದಮಲ್ಲದೆ ಅದು ಸಲ್ಲದು; ಕಟ್ಟಿಯುಮೇನೊ ಮಾಲೆಗಾ
ಜನ ಪೊಸ ಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ ?

ರಸವತ್ತಾದ ಕವಿತೆಯನ್ನು ನಿಂದಿಸುವ ದುರ್ಜನರನ್ನೂ ಅಜ್ಞಾನಿಗಳಾದ ಕುಕವಿಗಳನ್ನೂ ಜನ್ನ ಹೀಗೆ ಕಟುವಾಗಿ ವಿಡಂಬನ ಮಾಡುತ್ತಾನೆ: "ರಸವತ್ ಕೃತಿಯಂ ಕವಿ ಪೇೞ್ಗೆ, ದುರ್ಜನಂ ಪಟಿಯುತುಮಿರ್ಕೆ: ಬಾೞ್ವ ಮನೆಗೊಂದು ಬಗುೞ್ವುದು ಬೇೞ್ಕುಮೆನ್ನಿರೇ"; "ಅಱಿಯದೆ ಪದವಿನ್ಯಾಸಮಂ, ಅಱಿಯದೆ ಸಾರಸ್ಯಮಂ, ಪರಪ್ರತಿಭೆಯ ಗುಣ್ಪಱಿಯದೆ ತಾಮುಂ ಕೆಮ್ಮಗೆ ಡುಱುಕೆಂಬುವು ಕುಕವಿಕೂಪಮಂಡೂಕಂಗಳ್."

'ಅನುಭವಮುಕುರ'ವೆಂಬ ಕಾಮಶಾಸ್ತ್ರ ಸಂಬಂಧವಾದ ಒಂದು ಕೃತಿಯೂ, ನಾಲ್ಕು ಶಾಸನಗಳೂ, 'ಯಶೋಧರಚರಿತೆ,' 'ಅನಂತನಾಥ ಪುರಾಣ' ಎಂಬ ಎರಡು ಕಾವ್ಯಗಳೂ ಜನ್ನನಿಂದ ರಚಿತವಾಗಿ ಉಪ ಲಬ್ಧವಾಗಿವೆ. ಜನ್ನನ ಶಾಸನಗಳು ರಾಜಭಕ್ತಿ ಪರವಾದ ಸಾಂಪ್ರದಾಯಿಕ ಚಂಪೂಶೈಲಿಯ ರಚನೆಗಳು; ದೇವಾಲಯಗಳಿಗೆ ದತ್ತಿಬಿಟ್ಟಿದ್ದು ಅವು ಹೇಳುವ ವಿಷಯ.

'ಯಶೋಧರಚರಿತೆ' ಹಾಗೂ 'ಅನಂತನಾಥಪುರಾಣ'ವನ್ನು ತುಸು ವಿಸ್ತಾರವಾಗಿ ಇನ್ನು ಪರಿಶೀಲಿಸಬೇಕು. ಜನ್ನ ತನಗಿಂತ ಹಿಂದಿನ ಪಂಪ ಮೊದಲಾದ ಕವಿಗಳಂತೆ ಲೌಕಿಕ, ಧಾರ್ಮಿಕ ಎಂದು ಇಬ್ಬಗೆಯಾಗಿ ಕಾವ್ಯರಚನೆ ಮಾಡಲಿಲ್ಲ. ತನ್ನೆರಡು ಕಾವ್ಯಗಳಲ್ಲೂ ಅವನು ಧಾರ್ಮಿಕ ವಸ್ತುವನ್ನು ನಿರೂಪಿಸಿದ್ದಾನೆ. ಆದರೆ 'ಯಶೋಧರಚರಿತೆ'ಯಲ್ಲಿ ಲೌಕಿಕದ ನೆಲೆಗಟ್ಟು ಇಲ್ಲದಿಲ್ಲ.

## ೨. 'ಯಶೋಧರ ಚರಿತೆ'

### ಕಥಾಸಾರ

(೧) ಯೌಧೇಯ ದೇಶದಲ್ಲಿ ರಾಜಪುರವೆಂಬ ಪಟ್ಟಣವಿತ್ತು. ಅದನ್ನು ಮಾರಿದತ್ತನೆಂಬ ದೊರೆ ಆಳುತ್ತಿದ್ದ. ಆ ಪುರದ ದಕ್ಷಿಣ ದಿಕ್ಕಿನಲ್ಲಿ 'ಪಾಪಕಳಾಪಂಡಿತೆ' ಚಂಡಮಾರಿಯ ಆಲಯವಿತ್ತು. ಆಶ್ವಯುಜ ಚೈತ್ರಮಾಸಗಳಲ್ಲಿ ಪುರಜನರು ಅರಸನನ್ನು ಮುಂದಿಟ್ಟುಕೊಂಡು ಜಾತ್ರೆ ನೆರೆದು ದೇವಿಯನ್ನು ಆರಾಧಿಸುತ್ತಿದ್ದರು. ಇಲ್ಲವಾದರೆ ಪ್ರಳಯವೆ ಆಗುತ್ತಿತ್ತು. ಹೀಗಿರಲು, ಒಮ್ಮೆ ಬಂದ ವಸಂತ ಮಾಸದಲ್ಲಿ ಮಾರಿದತ್ತನೂ ಪುರಜನರೂ ಜಾತ್ರೆಗೆ ಸೇರಿದರು. ಮಾರಿಗೆ ಮೊದಲು

ನರಬಲಿ ಕೊಡಬೇಕಾದುದರಿಂದ, ಇಬ್ಬರು ಮನುಷ್ಯರನ್ನು ಹಿಡಿದು ತರುವಂತೆ ಮಾರಿದತ್ತ ಚಂಡಕರ್ಮನೆಂಬ ತಳಾರನಿಗೆ ಆಜ್ಞಾಪಿಸಿದ.

ಇಷ್ಟರಲ್ಲಿ ಸುದತ್ತಾಚಾರ್ಯರೆಂಬ ಯತಿಗಳು ಗಮನ ಪ್ರಾಯಶ್ಚಿತ್ತಕ್ಕಾಗಿ ಆ ಪುರದ ಉಪವನಕ್ಕೆ ಆಗಮಿಸಿದರು. ಮುನಿಗಳೊಡನೆ ಅವರು ಉಪವಾಸದಳೆದು, ತಮ್ಮಲ್ಲಿದ್ದ ಇಬ್ಬರು ಎಳೆಯರನ್ನು ಭಿಕ್ಷೆಗೆ ಕಳುಹಿಸಿದರು. ಚರಿಗೆಗೆ ಹೊರಟ ಅಭಯರುಚಿ, ಅಭಯಮತಿ ಎಂಬ ಆ ಇಬ್ಬರು ಅಣ್ಣ ತಂಗಿಯರನ್ನು ಕಂಡ ಚಂಡಕರ್ಮ, ಎಳೆಯ ಹರಿಣ ಗಳನ್ನು ಹುಲಿ ಹಿಡಿಯುವಂತೆ ಹಿಡಿದುಕೊಂಡ.

ಆಗ ಅಭಯರುಚಿ ತಂಗಿಗೆ, "ಅಭೀತೆಯಾಗು ಎಲಗೆ ತಾಯೆ, ಮರಣದ ದೆಸೆಯೊಳ್" ಎಂದು ಧೈರ್ಯ ಹೇಳಿದ; "ನಿಯತಿಯನಾರ್ ಮೀಱಿದಪರ್?...ಪೆತ್ತ ಪರೀಷಹ[1] ಜಯಮೆ ತಪಂ, ತಪಕೆ ಬೇಱಿ ಕೋಡೆರಡೊಳವೇ ?" ಎಂದು ಸಂತೈಸಿದ. ಅಣ್ಣನ ಮಾತನ್ನು ಕೇಳಿದ ಅಭಯಮತಿ "ಮಾಡಿದುದಂ ನಾವುಣ್ಣದೆ ಪೋಕುಮೆ ? ಭಯಮೇಕಣ್ಣ? ಭವಪ್ರಕೃತಿವಿಕೃತಿ ನಾವಱಿಯದುದೇ ?" ಎಂದು ಮರುನುಡಿದು, ಹೀಗೆಂದಳು :

ಎನಿತೊಳವು[2] ಅಪಾಯಕೋಟಿಗಳ್,
ಅನಿತರ್ಕಂ ಗೇಹಂ ಅಲ್ತೆ ದೇಹಂ ? ಇದಂ ನೆ
ಟ್ಟನೆ ಪೊತ್ತು ಸುಖಮನಱಿಸುವ
ಮನುಜಂ ಮೊರಡಿ[3]ಯೊಳೆ ಮಾದುಫಳ[4]ಮಱಿಸದಿರಂ !

ಹೀಗೆ ಒಬ್ಬರನ್ನೊಬ್ಬರು ಸಮಾಧಾನಪಡಿಸುತ್ತ ಆ ಅಣ್ಣತಂಗಿ ಯರು "ಪಸಿದ ಕೃತಾಂತನ ಬಾಣಸು[5]ವೊಲಿರ್ದ" ಮಾರಿಯ ಮನೆಯನ್ನು

---

[1] ಪರೀಷಹ = ಬಗೆಬಗೆಯ ಕ್ಲೇಶಗಳು. [2] ಒಳವು = ಉಂಟು. [3] ಮೊರಡಿ = ಕಲ್ಲುಗುಡ್ಡ. [4] ಮಾದುಫಳ = ಒಂದು ಬಗೆಯ ಹಣ್ಣು. [5] ಬಾಣಸು = ಅಡುಗೆ ಮನೆ.

ಹೊಕ್ಕರು. ಅಲ್ಲಿನ ದೃಶ್ಯ ಭಯಂಕರವಾಗಿತ್ತು. ಆದರೆ ಅವರು ಒಂದಿನಿತೂ ವಿಚಲಿತರಾಗಲಿಲ್ಲ. ಅವರ ಕೆಚ್ಚನ್ನು ಕಂಡು ಮಾರಿದತ್ತ ಬೆಕ್ಕಸಬೆರಗಾದ.

ಭೈರವನ ಜವನ ಮಾರಿಯ
ಮೂರಿ[1]ಯುಪ್ಪೊಲ್ ನಿಂದ ಮಾರಿದತ್ತಂ ಲಲಿತಾ
ಕಾರರ ಧೀರರ ಬಂದ ಕು
ಮಾರರ ರೂಪಿಂಗೆ ಠಕ್ಕುಗೊಂಡಂತಿರ್ದಂ[2]

ಆಗ ಅಲ್ಲಿದ್ದವರು ದೊರೆಯನ್ನು ಹರಸಿರೆಂದು ನುಡಿದಾಗ, 'ಮಂದರಧೀರ'ನಾದ ಅಭಯರುಚಿ, "ನಿರ್ಮಲ ಧರ್ಮದಿಂದೆ ಪಾಲಿಸು ಧರೆಯಂ" ಎಂದು ಹರಸಿದ. ಮಕ್ಕಳ ನಿರ್ಭೀತಿಗೆ ಸೋಜಿಗಗೊಂಡ ಮಾರಿದತ್ತ 'ಧೀರರಕಟ ಕುಮಾರರ್' ಎಂದು ನುಡಿದು, ಅವರನ್ನು ಬಲಿಗೊಡದೆ, "ನೀವಾರು? ಎಲ್ಲಿಂದ ಬಂದಿರಿ? ಬಾಲ್ಯದಲ್ಲಿಯೆ ಈ ಭಿಕ್ಷಾವೃತ್ತಿಯೇಕೆ ?" ಎಂದು ಬೆಸಗೊಂಡ. ತಮ್ಮ ನಿರ್ಮಲಚಾರಿತ್ರ್ಯ ಧರ್ಮಪರರಿಗಲ್ಲದೆ ಬೇರೆಯವರಿಗೆ ಹಿಡಿಸುವುದಿಲ್ಲವೆಂದು ಅಭಯರುಚಿ ತಿಳಿಸಿದ. ಆದರೆ ಹೇಳಲೇಬೇಕೆಂದು ಮಾರಿದತ್ತ ಒತ್ತಾಯ ಮಾಡಿದುದರಿಂದ, ಅವನಿಗೆ ಕಾಲಲಬ್ಧಿಯುಂಟಾಗಿದೆಯೆಂದರಿತು ಅಭಯರುಚಿ ತಮ್ಮ ಕಥೆಯನ್ನು ನಿರೂಪಿಸತೊಡಗಿದ.

(೨) ಅವಂತಿದೇಶದ ಉಜ್ಜಯಿನೀಪುರವನ್ನು ಯಶೌಘನೆಂಬ ರಾಜ ಪಾಲಿಸುತ್ತಿದ್ದ. ಅವನ ಪತ್ನಿ ಚಂದ್ರಮತಿ. ಅವರಿಗೆ ಯಶೋಧರನೆಂಬ ಮಗ ಹುಟ್ಟಿದ :

ನೋಡುವ ಕಣ್ಗಳ ಸಿರಿ, ಮಾ
ತಾಡುವ ಬಾಯ್ಗಳ ರಸಾಯನಂ, ಸಂತಸದಿಂ

---

[1] ಮೂರಿ=ಕೋಣ. [2] ಠಕ್ಕುಗೊಳ್=ಬೆರಗಾಗು

ಕೂಡುವ ತೋಳ್ಗಳ ಪುಣ್ಯಂ,
ಸಾಮಾಡಿ[1]ಯೆ ರೂಪು ಕುವರ ವಿದ್ಯಾಧರನಾ ?

ಆ ಯಶೋಧರನಿಗೆ ಅಮೃತಮತಿಯೆಂಬುವಳು ಮನಃಪ್ರಿಯೆಯಾಗಿದ್ದಳು. ಅವಳನ್ನೇ ದೀಪವಾಗಿ ಮಾಡಿಕೊಂಡು ಮನ್ಮಥನೆಂಬ ಬೇಡ ಯಶೋಧರನನ್ನು ಆಕರ್ಷಿಸುತ್ತಿದ್ದ.

ಒಮ್ಮೆ ಯಶೌಘ ತನ್ನ ನರೆಗೂದಲನ್ನು ಕಂಡು ವಿರಕ್ತನಾಗಿ ಯಶೋಧರನಲ್ಲಿ ರಾಜ್ಯವನ್ನಿರಿಸಿ ತಪೋವನಕ್ಕೆ ತೆರಳಿದ. ಯಶೋಧರ ಅಮೃತಮತಿಯರು ಅನ್ಯೋನ್ಯಪ್ರೇಮದಿಂದ ಸಕಲ ಭೋಗಗಳನ್ನನುಭವಿಸುತ್ತಿದ್ದರು.

ಒಂದು ದಿನ ಸಂಜೆ ಯಶೋಧರ ಆಸ್ಥಾನವನ್ನು ವಿಸರ್ಜಿಸಿ, "ಅಂಬರತರಂಗಿಣೀಪುಳಿನ[2]ಮನೇಱುವ ಹಂಸನಂತೆ" ಪ್ರಾಸಾದವನ್ನೇರಿ, ಅಮೃತಮತಿಯ ಶಯ್ಯಾಗೃಹವನ್ನು ಪ್ರವೇಶಿಸಿದ; ಆ ದಂಪತಿಗಳು "ಮನೋಜನಾಡಿಸುವ ಜಂತ್ರದಂತಿರೆ" ನೆರೆದರು. ಅನಂತರ ಅವಳು ಸುಖನಿದ್ರೆಯಲ್ಲಿದ್ದಾಗ, ಗರಟಿಗೆಯ ಜಾವದ ಉಕ್ಕಡದುಲಿ ನಿಂತ ಹೊತ್ತಿನಲ್ಲಿ ಅರಮನೆಯ ಪಕ್ಕದಲ್ಲಿ ವಾಸಿಸುತ್ತಿದ್ದ ಪಟ್ಟದಾನೆಯ ಮಾವಟಿಗ ವಿನೋದಕ್ಕೆ ಹಾಡತೊಡಗಿದ. ಆ ಹಾಡಿನಿಂದ ಅಮೃತಮತಿಯ ನಿದ್ದೆ ತಿಳಿಯಿತು; ಅವಳು ಆ ಇನಿದನಿಗೆ ವಶಳಾಗಿ, ಹಾಡುಗಾರನಲ್ಲಿ ಮೋಹಗೊಂಡಳು.

ಬಿನದಕೆ ಪಾಡುತ್ತಿರೆ, ನುಣ್
ದನಿ ನಿದ್ದೆಗೆ ಕತಕಬೀಜ[3]ಮಾಯ್ತೆನೆ, ಮೃಗಲೋ
ಚನೆ ತಿಳಿದಾಲಿಸಿ, ಮುಟ್ಟಿದ
ಮನಮಂ ತೊಟ್ಟನೆ ಪಸಾಯದಾನಂ[4]ಗೊಟ್ಟಳ್ !

---

[1] ಸಾಮಾಡಿ =ಸಾಮಾನ್ಯ. [2] ಪುಳಿನ=ಮರಳು, [3] ಕತಕಬೀಜ=ನೀರನ್ನು [illegible]ಮಾಡುವ ಒಂದು ಬೀಜ. [4] ಪಸಾಯದಾನ=ಸರ್ವಸ್ವದಾನ.

ಆ ನೃತ್ಯಗೀತದಿಂದ ಮನಸ್ಸುಕೆಟ್ಟ ಅಮೃತಮತಿಗೆ, ಅದನ್ನು ಹಾಡಿದವನನ್ನು ನೋಡುವ ಮತ್ತು ಕೂಡುವ ಚಿಂತೆ ಬಲಿಯಿತು. ಬೆಳಗಾದ ಕೂಡಲೆ ತನ್ನ ನೆಚ್ಚಿನ ಕೆಳದಿಯನ್ನು ಕರೆದು ಆತನ ಬಳಿಗೆ ಕಳುಹಿಸಿದಳು.

ಆ ದೂತಿ ಹೋಗಿ, ಅಷ್ಟವಂಕನಾದ ಆ ಮಾವಟಿಗನನ್ನು ನೋಡಿ ಹಿಮ್ಮೆಟ್ಟಿ, ಹೀಗೆಂದುಕೊಂಡಳು:

ಅಮೃತಮತಿಯೆತ್ತ, ರೂಪಾ
ಧಮನ್ ಅಷ್ಟಾವಂಕನೆತ್ತ ! 'ಚಿತ್ರಂ ! ಅಪಾತ್ರೇ
ರಮತೇ ನಾರೀ'[1] ಎಂಬುದು
ಸಮನಿಸಿತು ಬೆಂದ ಬಿದಿಗೆ ಕಣ್ಣೆಲ್ಲಿಕ್ಕುಂ !

ತನ್ನರಸಿಯಲ್ಲಿಗೆ ಹಿಂದಿರುಗಿದ ದೂತಿ, "ಅಸಿಯಳ್[2], ನೀನ್ ಇಂತಪ್ಪ ಕಾಮದೇವಂಗೆ ಎಂತೆಂತು ಅಯ್ದು ಅಱಸಿ ಕೂರ್ತೆ[3] ಎಂದಾನಱಿಯೆಂ" ಎಂದು ವ್ಯಂಗ್ಯವಾಗಿ ನುಡಿದಳು. ಅಮೃತಮತಿ ತವಕದಿಂದ, "ಪೇೞ್, ಪೇೞ್, ಕಾದಲ[4]ನಂತಿರೆ ಚೆಲ್ವನೆ ?" ಎಂದು ಕೇಳಿದಳು. ಆಗ ದೂತಿ ಅಷ್ಟವಂಕನನ್ನು ಹೀಗೆ ವರ್ಣಿಸಿದಳು :

ಪಱಿದಲೆ, ಕುೞಿನೊಸಲ್, ಅೞಿಗಣ್,
ಒಱೆವಾಯ್, ಹಪ್ಪಳಿಕೆ ಮೂಗು, ಮುರುಟಿದ ಕಿವಿ, ಬಿ
ಬ್ಬಿಱಿವಲ್ ಕುಸಿಗೊರಲ್, ಇೞಿದೆರ್ದೆ,
ಪೊಱಂಟು ಬೆನ್, ಬಾತ ಬಸಿಱ್, ಅಡಂಗಿದ ಜಘನಂ !

ಅವನ ಚರ್ಮ ಕಪ್ಪು, ಮೈ ನಾರುತ್ತಿದೆ, ಬೆನ್ನು ಗೂನಾಗಿದೆ. "ಕಾಲ್ ಮಱೆಯಿಸುವುದು ಟೊಂಕ ಮುಱಿದ ಕತ್ತೆಯ ಕಾಲಂ !"

ತನ್ನ ನಲ್ಲ ಇಂತಹವನೆಂಬುದನ್ನು ಕೇಳಿದ ಅಮೃತಮತಿ

---

[1] 'ವಿಚಿತ್ರ! ಹೆಂಗಸು ಅಯೋಗ್ಯನಲ್ಲಿ ರಮಿಸುತ್ತಾಳೆ'. [2] ಅಸಿಯಳು= ಕೃಶದೇಹವುಳ್ಳವಳು, [3] ಕೂರ್ತೆ=ಪ್ರೀತಿಸಿದೆ. [4] ಕಾದಲ = ನಲ್ಲ

ಗದ್ಗದಕಂಠೆಯಾಗಿ ಕಂಬನಿದುಂಬಿ "ಪುಳಿಂದನ ಕಣೆಗಟ್ಟಿನಿಂದ ವನಹರಿಣಿಯವೋಲ್" ಹೀಗೆ ನುಡಿದಳು :

ಕರಿದಾದೊಡೆ ಕತ್ತುರಿಯಂ,
ಮುರುಡಾದೊಡೆ ಮಲಯಜಂಗಳಂ, ಕೊಂಕಿದೊಡೇಂ
ಸ್ಮರಚಾಪಮನ್, ಇಳಿಕಯ್ವರೆ[1]
ಮರುಳೇ ! ಪೊಲ್ಲಮೆಯೆ[2] ಲೇಸು ನಲ್ಲರ ಮೆಯ್ಯೊಳ್ !

ಒಲವಾದೊಡೆ ರೂಪಿನ ಕೋ
ಟಲೆಯೇವುದೊ ? ಕಾರ್ಯಮಾಗೆ ಕಾರಣದಿಂದಂ
ಫಲಮೇನ್ ? ಇಂದೆನಗಾತನೆ
ಕುಲದೈವಂ. ಕಾಮದೇವನ್, ಇಂದ್ರಂ, ಚಂದ್ರಂ !

ಹೀಗೆಂದು ಹೇಳಿ, ದೂತಿಗೆ ಲಂಚವಿತ್ತು, ಅವಳ ನೆರವಿನಿಂದ ಅಷ್ಟವಂಕನನ್ನು ಕೂಡಿದಳು. ಅವಕಾಶ ಸಿಕ್ಕಿದಾಗಲೆಲ್ಲ ಹಗಲಿರುಳು ಆತನೊಡನೆ ಸುಖಿಸುತ್ತಿದ್ದಳು. ಅವನಲ್ಲಿ ರುಚಿ ಕಂಡ ಅಮೃತಮತಿಗೆ ಗಂಡನಾದ ಯಶೋಧರನಲ್ಲಿ ಒಲವು ದಿನದಿನಕ್ಕೆ ಕುಗ್ಗಿತು, "ಬೇವಂ ಮೆಚ್ಚಿದ ಕಾಗೆಗೆ ಮಾವು ಇಟಿದಪ್ಪಂತೆ."

ಹೆಂಡತಿ ಮೊದಲಿನಂತಿಲ್ಲದಿರುವುದನ್ನು ಗಮನಿಸಿದ ಯಶೋಧರ, ಅವಳ ನಡತೆಯನ್ನು ಪರೀಕ್ಷಿಸಿ ನೋಡಲು ನಿರ್ಧರಿಸಿದ. ಒಂದಿರುಳು ಅವನು ಶಯ್ಯೆಯಲ್ಲಿ ನಿದ್ದೆಹೋದವನಂತೆ ನಟಿಸಿರಲು ಅಮೃತಮತಿ ಅವನ ತೋಳ್ಸೆರೆಯಿಂದ ನುಸುಳಿ ಜಾರನ ಬಳಿಗೆ ಹೊರಟಳು. ಆಗ ಯಶೋಧರ ಕತ್ತಿಯನ್ನು ಹಿಡಿದು ಅವಳ ಹಿಂದೆಯೇ ಮರೆಯಲ್ಲಿ ಹೋದ, 'ದೋಷದ ಬೆನ್ನೊಳೆ ಸಂಧಿಸುವ ದಂಡದಂತೆ.'

ಇತ್ತ, ತಡಮಾಡಿ ಬಂದ ಅರಸಿಯನ್ನು ಕಂಡು ಮುಳಿದ ಅಷ್ಟವಂಕ ಅವಳು ತಂದ ಗಂಧಮಾಲ್ಯಾದಿಗಳನ್ನು ಕಿತ್ತೆಸೆದು, ಕುರುಳನ್ನು

---

[1] ಇಳಿಕಯ್ = ಕಡೆಗಣಿಸು. [2] ಪೊಲ್ಲಮೆ = ಕೆಟ್ಟುದು.

ಬಡಿದೆಳೆದು, "ಕಳಹಂಸೆಗೆ ಗಿಡುಗನೆಱಗಿದಂತಿರೆ" ಅವಳನ್ನು ಚಾಟಿಯಿಂದ ಬಡಿದ, ಕಾಲಿನಿಂದ ಒದೆದ. ಆಗ ಅಮೃತಮತಿ 'ಕೇರೆ ಪೊರಳ್ವಂತೆ' ಅವನ ಕಾಲಮೇಲೆ ಹೊರಳಿ,

ತಪಮಾದುದುಂಟು ನಲ್ಲನೆ.
ಬಡಿ, ಮುಳಿಯದಿರ್, ಅರಸನೆಂಬ ಪಾತಕನೆನ್ನಂ
ತೊಡೆಯೇಱಿಸಿ ಕೇಳಿಕೆ[1] ಯಾ
ಡೊಡೆ ನೋಡುತ್ತಿರ್ದೆನ್, ಉಂತೆ ನಿಲಲ್ ಅಣ್ಮುವೆನೇ ?[2]

ಎಂದು ತಾನು ತಡವಾಗಿ ಬಂದುದಕ್ಕೆ ಕಾರಣ ಹೇಳಿದಳು. "ಗಜವೆಡಂಗ, ನೀನ್ ಉಱಿದೊಡೆ ಸಾವವಳ್, ಎನಗೆ ಮಿಕ್ಕ ಗಂಡರ್ ಸವಸೋದರರ್!" ಎಂದು ಅವನಿಗೆ ಭರವಸೆ ನೀಡಿದಳು.

ಇದನ್ನೆಲ್ಲ ನೋಡುತ್ತಿದ್ದ ಯಶೋಧರನಿಗೆ ರೋಷ ಉಕ್ಕಿಬಂತು; ಇಬ್ಬರನ್ನೂ ಸೀಳಿಹಾಕಬೇಕೆಂದುಕೊಂಡವನು ಮರುಕ್ಷಣವೇ ಸಮಾಧಾನ ತಂದುಕೊಂಡ.

ಅಗಳ್ ಬಾಳ್[3] ನಿಮಿರ್ದುದು.[4] ತೋಳ್
ತೂಗಿದುದು, ಮನಂ ಕನಲ್ದುದು, ಇರ್ವರುಮನ್ ಎರಟ್
ಬಾಗಂ ಮಾಡಲ್, ಧೃತಿ ಬಂ
ದಾಗಳ್ ಮಾಣ್ ಎಂಬ ತೆಱದೆ ಪೇಸಿದನರಸಂ

ತನ್ನ ಖಡ್ಗವಿರುವುದು ಅರಿನೃಪರನ್ನು ಕೊಲ್ಲುವುದಕ್ಕಾಗಿ, ಈ ಕೀಳರ ಮೇಲೆ ಅದನ್ನು ಪ್ರಯೋಗಿಸತಕ್ಕದ್ದಲ್ಲ, ಹಾಗೆ ಮಾಡಿದರೆ ತನ್ನ ಧವಳಯಶಕ್ಕೆ ಕುಂದು, ಹೆಣ್ಣು ತಪ್ಪಿನಡೆದರೆ ಕೊಲ್ಲುವುದು ಸಲ್ಲದು. ತುಚ್ಛವಸ್ತುವೆಂದು ತೊರೆದುಬಿಡುವುದು ಲೇಸು ಎಂದು ಚಿಂತಿಸಿದ ಯಶೋಧರ ಅವರನ್ನು ಇರಿಯಲೊಲ್ಲದೆ ಮುನ್ನಿನಂತೆ ಬಂದು ಮಲಗಿಕೊಂಡ. ಅನಂತರ

---

[1] ಕೇಳಿಕೆ=ವಿನೋದ. [2] ಅಣ್ಮು=ಸಾಹಸ ಮಾಡು. [3] ಬಾಳ್=ಕತ್ತಿ
[4] ನಿಮಿರ್=ಮೇಲೇಳು.

ಅಮೃತಮತಿಯೂ ಮೆಲ್ಲಗೆ ಬಂದು ಮಲಗಿದಳು. "ಒಲಿದ ಹೆಣ್ಣು ಪರರಲ್ಲಿ ಆಸಕ್ತಳಾದರೆ ಇದು ಸುಖವೆ? ಮುಕ್ತಿಯೆ ಪರಮಸುಖ, ಅದನ್ನು ಸಾಧಿಸುತ್ತೇನೆ. ಹೆಣ್ಣಿನ ಸ್ನೇಹ ಸಾಕು" ಎಂದು ನಿಶ್ಚಯಿಸಿ ಯಶೋಧರ ಕಷ್ಟದಿಂದ ಆ ರಾತ್ರಿಯನ್ನು ಕಳೆದ.

ಬೆಳಗಾಯಿತು. ರಾಜ ಮೈಮುರಿದೆದ್ದು, ಪರಿಜನರೊಡನಿದ್ದ ಅರಸಿಯ ಬಳಿಗೆ ಹೋಗಿ ನಗೆನುಡಿಯ ನೆಪಹೂಡಿ, ಅವಳನ್ನು ನೈದಿಲೆ ಹೂವಿನಿಂದ ಹೊಡೆದ; ಅಷ್ಟಕ್ಕೇ ಅಮೃತಮತಿ ಮೂರ್ಛೆ ಹೋದಳು. ಆಗ "ಅಕಟಕಟ ನೊಂದಳೆತ್ತಿರೆ ಸುಕುಮಾರಿಯಂ!" ಎಂದು ದೊರೆ ಕೊಂಕುನುಡಿದ; "ಇಂದು ನಿನಗೆ ಬಂದ ಸಾವು ಹೇಗೋ ದೈವದಿಂದ ಪರಿಹಾರವಾಯಿತು, ಆದರೆ ಈ ನೈದಿಲೆಯೆ ನಿನಗೆ ಸಾವಾಯಿತು" ಎಂದು ಹೋದಿರುಳಿನ ಸಂಗತಿಯನ್ನು ಸೂಚಿಸಿ, ತನ್ನ ತಾಯ ಬಳಿಗೆ ತೆರಳಿದ. ತನ್ನ ಗುಟ್ಟು ಗಂಡನಿಗೆ ಗೊತ್ತಾಯಿತೆಂದು ತಿಳಿದು ಅಮೃತಮತಿ ಸತ್ತಂತಾದಳು.

ಮಗನ ಕಾಂತಿಹೀನವಾದ ಮುಖವನ್ನು ಕಂಡ ಚಂದ್ರಮತಿ ಕಾತರಗೊಂಡು ಅವನ ವ್ಯಥೆಗೆ ಕಾರಣವೇನೆಂದು ಕೇಳಿದಳು. ಆಗ ಯಶೋಧರ, "ನನಗಾವ ಕೊರತೆಯೂ ಇಲ್ಲ. ಆದರೆ ಕಳೆದಿರುಳು ಒಂದು ಹೊಂದಾವರೆ ಕೊಳದ ಹಂಸ ಕೊಳೆತ ತಾವರೆಗೊಳದಲ್ಲಿ ನಲಿಯುತ್ತಿದ್ದ ಕನಸು ಕಂಡೆ. ಆ ದುಃಸ್ವಪ್ನದಿಂದ ಮನಸ್ಸು ತಲ್ಲಣಿಸುತ್ತಿದೆ" ಎಂದು ಹೆಂಡತಿಯ ದುರಾಚಾರವನ್ನು ಕನಸಿನ ನೆವದಿಂದ ಸೂಚಿಸಿದ. ಆದರೆ ಅದನ್ನು ನಿಜವೆಂದೇ ನಂಬಿದ ತಾಯಿ ಹೆದರಿ, ಆ ಕನಸು ದೋಷಾವಹ ವಾದುದೆಂದೂ ಅದರಿಂದಾಗುವ ಕೇಡು ನಿವಾರಣೆಯಾಗಬೇಕಾದರೆ ಕುರಿಯೊಂದನ್ನು ಬಲಿಕೊಡಬೇಕೆಂದೂ ತಿಳಿಸಿದಳು. ಆಗ ಯಶೋಧರ 'ಶಾಂತಂ ಪಾಪಂ' ಎಂದು ಕಿವಿ ಮುಚ್ಚಿಕೊಂಡು ತಾಯಿಗೆ ಹೀಗೆಂದ:

ಮೇಗಂ[1] ಬಗೆವೊಡೆ ವಧೆ ಹಿತ
ಮಾಗದು ಮರ್ತ್ಯಂಗೆ, ನಿತ್ಯಮೇ ಮಾನಸವಾಟ್
ಈಗಳೊ ಮೇಣ್ ಆಗಳೊ ಮೇಣ್
ಸಾಗುದುರೆಗೆ[2] ಪುಲ್ಲನಡಕಿ ಕಿಡುವನೆ ಚದುರಂ ?

ಆದರೆ ಚಂದ್ರಮತಿ ಮಗನ ಮೇಲಿನ ಮೋಹದಿಂದ, ಶಾಂತಿ ಮಾಡಲೇಬೇಕೆಂದು ಹಟ ಹಿಡಿದಳು. "ಜೀವದಯೆ ಜೈನಧರ್ಮಂ-ತಪ್ಪಿ ನುಡಿದಿರ್, ಕಾವರೆ ಕಣೆಗೊಳ್ವೊಡೆ, ಅಪ್ಪೇ, ಬಾರಿಪರೊಳರೇ[3]?" ಎಂದು ಯಶೋಧರ ತಾಯಿಯನ್ನು ಹಿಂಸೆಯಿಂದ ವಿಮುಖಿಗೊಳಿಸಲು ಪ್ರಯತ್ನಿಸಿದ. ಆದರೆ ಚಂದ್ರಮತಿ ಕಿವಿಗೊಡಲಿಲ್ಲ. "ಹಿಟ್ಟಿನ ಕೋಳಿಯನ್ನಾದರೂ ಬಲಿಗೊಡುತ್ತೇನೆ. ಇಲ್ಲವಾದರೆ, ನಾನೇ ಬಲಿಯಾಗಿ ದುರಿತವನ್ನು ಪರಿಹರಿಸುತ್ತೇನೆ" ಎಂದು ನುಡಿದಳು. ಹಿಂಸೆಗೆ ಒಪ್ಪಿದರೆ ಕೇಡು, ಒಪ್ಪದಿದ್ದರೆ ಮಾತೆಯ ಮರಣ—ಈ ಉಭಯಸಂಕಟದಲ್ಲಿ ಸಿಕ್ಕಿದ ಯಶೋಧರ ಮಾತೃಪ್ರೇಮಕ್ಕೆ ಕಟ್ಟುಬಿದ್ದು, ಹಿಟ್ಟಿನ ಕೋಳಿಯ ವಧೆಗೆ ಸಮ್ಮತಿಸಿದ.

ಬಳಿಕ ತಾಯಿಮಕ್ಕಳು ಚಂಡಮಾರಿಯನ್ನು ಅರ್ಚಿಸಿ, ಹಿಟ್ಟಿನ ಕೋಳಿಯನ್ನು ಬಲಿ ಹೊಯ್ದರು. ಆ ಕೋಳಿಯ ಚಿತ್ರ ಪರಿಶೋಭೆಯಿಂದ ಆಕರ್ಷಿತವಾದ ಬೆಂತರವೊಂದು ಅದನ್ನು ಆಶ್ರಯಿಸಿತ್ತು. ಕೋಳಿಯ ತಲೆ ಬೇರ್ಪಟ್ಟೊಡನೆಯೇ ಆ ಬೆಂತರ ಕುಕ್ಕೊಕೂ ಎಂದು ಕೂಗಿ ಹೊರ ನೆಗೆಯಿತು. "ಕೂಗಿ ಕರೆವ ದುರಿತದ ಬಲ್ಲುಲಿಯೆನೆ" ಹೊಮ್ಮಿದ ಆ ಕೂಗನ್ನು ಕೇಳಿ ಯಶೋಧರ ದಿಗ್ಭ್ರಾಂತನಾದ. ತಾಯಿಯ ಮಾತನ್ನು ಕೇಳಿ ತಾನು ಮಾಡಿದ ಹಿಂಸೆಗಾಗಿ ಮಮ್ಮಲ ಮರುಗಿದ. "ಆರಜೀವರಯ್ಯ ವಿಧಿವಿಳಸನಮಂ !" ಎಂದು ಬೆರಗಾದ.

---

[1] ಮೇಗು=ಉನ್ನತಿ. [2] ಸಾಗುದುರೆ=ಸಾಯಲಿರುವ ಕುದುರೆ. [3] ಬಾರಿಪರ್=ನಿವಾರಿಸುವವರು.

ಅಮೃತಮತಿಯೆಂಬ ಪಾತಕಿ
ಯ ಮಾಯೆ ಬಸಮಾಯ್ತು, ಚಂದ್ರಮತಿಮಾತೆಯ ಮಾ
ತೆ ಎಮಗೆ ಬಲೆಯಾಯ್ತು, ಹಿಂಸನಂ
ಅಮೋಘ ಶರಮಾಯ್ತು, ಕೆಡೆದುದು ಆತ್ಮಕುರಂಗಂ[1]!

ಎಂದು ಚಿಂತಿಸಿ ರಾಜ್ಯತ್ಯಾಗಕ್ಕೆ ಸಿದ್ಧನಾದ. ಮಗನಾದ ಯಶೋಮತಿಗೆ ರಾಜ್ಯವನ್ನು ಕೊಟ್ಟು ತಪಕ್ಕೆ ಹೋಗಲಿರುವಾಗ ಅಮೃತಮತಿ ಮೃತ್ಯುವಿನಂತೆ ಬಂದು, "ಇಂದು ನೀವೂ ನಿಮ್ಮ ತಾಯಿಯೂ ನನ್ನ ಅರಮನೆಯಲ್ಲಿ ಆರೋಗಿಸಬೇಕು" ಎಂದು ಬಿನ್ನವಿಸಿದಳು. ದೊರೆ ಅರೆಮನಸ್ಸಿನಿಂದ ಒಪ್ಪಿ ತಾಯೊಡನೆ ಉಣಹೋದಾಗ, "ಮಾಡಿದುದನ್ ಉಣ್ ಮಹಾರಾಜ!" ಎನ್ನುವಂತೆ ನಂಜಿನ ಲಡ್ಡುಗೆಗಳನ್ನು ಬಡಿಸಿ ಆ ಪಾತಕಿ ಪತಿಯನ್ನೂ ಅತ್ತೆಯನ್ನೂ ಕೊಂದುಬಿಟ್ಟಳು.

(೩) ಸತ್ತ ಯಶೋಧರ ಚಂದ್ರಮತಿಯರು ಮುಂದಿನ ಜನ್ಮದಲ್ಲಿ ನವಿಲು, ನಾಯಿಗಳಾಗಿ ಹುಟ್ಟಿ ಯಶೋಮತಿಯ ಅರಮನೆಯನ್ನು ಸೇರಿದರು. ನವಿಲು ಸೆಜ್ಜೆವನೆಯಲ್ಲಿ ಆಡುತ್ತಿದ್ದು, ಅಮೃತಮತಿಯೊಡನಿದ್ದ ಅಷ್ಟವಂಕನ ಕಣ್ಣನ್ನು ಭವರೋಷದಿಂದ ಕುಕ್ಕಿತು. ಆಗ ಅವಳು ಅದನ್ನು ಹೊಡೆದಳು; ಅದು ಮೇಲಿನಿಂದ ಕೆಳಗೆ ಬೀಳುವಾಗ ನಾಯಿ ಅದನ್ನು ಕೊಂದು ತಿಂದಿತು. ಕೋಪಗೊಂಡ ಯಶೋಮತಿ ಆ ನಾಯಿಯನ್ನು ಕೊಂದ. ಎರಡು ಪ್ರಾಣಿಗಳೂ ಹೀಗೆ ಸತ್ತುದನ್ನು ಕಂಡು ಯಶೋಮತಿ ಮರುಗಿದ. "ಕಣ್ಣಱಿಯದೊಡಂ ಕರುಳಱಿಯದೆ ?"

ಮುಂದಿನ ಭವದಲ್ಲಿ ಆ ನವಿಲು ನಾಯಿಗಳು ಹಾವು ಮತ್ತು ಮುಳ್ಳುಹಂದಿಯಾಗಿ ಹುಟ್ಟಿದುವು. ಹಾವನ್ನು ಮುಳ್ಳುಹಂದಿ ಕೊಂದಿತು; ಮುಳ್ಳುಹಂದಿಯನ್ನು ಒಂದು ಹುಲಿ ತಿಂದಿತು. ಮತ್ತೆ ಮುಳ್ಳುಹಂದಿ ಸಿಂಪಾನದಿಯಲ್ಲಿ ಮೀನಾಗಿ ಹುಟ್ಟಿತು; ಹಾವು ಅಲ್ಲಿಯೇ ಮೊಸಳೆ

---

[1] ಕುರಂಗ=ಜಿಂಕೆ.

ಯಾಯಿತು. ದೊರೆಯು ವಿನೋದದ ಕುಬ್ಜನನ್ನು ಮೊಸಳೆ ಹಿಡಿದುದರಿಂದ ಕ್ರುದ್ಧನಾದ ದೊರೆ ಅದನ್ನು ಜಾಲಗಾರನಿಂದ ತರಿಸಿ ಕೊಲ್ಲಿಸಿದ; ಮತ್ತೊಮ್ಮೆ, ಬಲೆಗೆ ಸಿಕ್ಕಿದ ಮೀನನ್ನು ಯಶೋಧರನ ಶ್ರಾದ್ಧಕ್ಕೆ ಅತ್ಯುತ್ತಮವೆಂದು ಸಜೀವವಾಗಿ ಅಡಿಗೆ ಮಾಡಿಸಿದ. "ನಾನಿಲ್ಲಿ ಮೀನಾಗಿ ಸಾಯುತ್ತಿದ್ದೇನೆ. ಯಶೋಧರ ಸ್ವರ್ಗದಲ್ಲಿದ್ದಾನೆಂದು ಈ ಬ್ರಾಹ್ಮಣರು ಹೇಳುತ್ತಿದ್ದಾರೆ. ಅಕ್ಕಟ ವಿಧಿಯೆ !" ಎಂದು ಯಶೋಧರನಾಗಿದ್ದ ಆ ಮೀನು ಮರುಗಿತು.

ಮುಂದೆ ಮೊಸಳೆ ಆಡಾಗಿ ಹುಟ್ಟಿತು; ಅದರ ಹೊಟ್ಟೆಯಲ್ಲಿ ಮೀನು ಹೋತವಾಗಿ ಜನಿಸಿತು. "ಸೊರ್ಕಿದ ಗೂಳಿ ತಾಯನೇಱಿತು" ಎನ್ನುವಂತೆ ಆ ಹೋತ ತಾಯಿಯೊಡನೆ ನೆರೆದಿದ್ದಾಗ, ಮತ್ತೊಂದು ಹೋತ ಅದನ್ನು ಕೊಂದಿತು; ಸತ್ತ ಹೋತದ ಜೀವ ತಾಯ ಗರ್ಭದಲ್ಲಿ ಸೇರಿಕೊಂಡಿತು. ಒಮ್ಮೆ ಬೇಟೆಗೆ ಬಂದಿದ್ದ ಯಶೋಮತಿ ಅಜಗರ್ಭಿಣಿ ಯನ್ನು ಬಾಣದಿಂದ ಹೊಡೆದ. ಬಸಿರಿನಲ್ಲಿದ್ದ ಮರಿ ಹುಣ್ಣಿನ ಬಾಯಿಂದ ಹೊರಬಿತ್ತು. ದೊರೆ ಕರುಣೆಗೊಂಡು ಅದನ್ನು ರಕ್ಷಿಸುವಂತೆ ಒಬ್ಬ ಮಾದರನಿಗೆ ಒಪ್ಪಿಸಿದ. ಒಮ್ಮೆ, ಕಾಗೆ ನಾಯಿಗಳು ಕೆಡಿಸಿದ ಹೋರಿಯ ಮಾಂಸವನ್ನು ಶುದ್ಧಗೊಳಿಸಲು ಆಡಿನ ರಜಸ್ಸು ಬೇಕೆಂದು ಪುರೋಹಿತರು ಹೇಳಿದರು. ಅದರಂತೆ ಹೋತದಿಂದ ಶುದ್ಧಿಮಾಡಿದ ಆಡಗನ್ನು ತಿಂದು ತಣಿದ ಪಾರ್ವರು, "ಯಶೋಧರ ಚಂದ್ರಮತಿಯರು ಸಗ್ಗ ಸುಖ ವನ್ನುಣ್ಣುತ್ತಿದ್ದಾರೆ" ಎಂದು ಹೇಳಿದರು. ಇದನ್ನು ಕೇಳಿದ ಹೋತಕ್ಕೆ ಜಾತಿ ಸ್ಮರಣೆಯುಂಟಾಯಿತು; ಯಶೋಧರನಾಗಿದ್ದ ತನಗೆ ನಂಜೂಡಿದ ಅಮೃತಮತಿಯ ಗತಿ ಏನಾಯಿತೆಂಬುದನ್ನು ಕಾಣಬೇಕೆನಿಸಿತು.

ದೊರೆಯ ಬಾಣದಿಂದ ಸತ್ತ ಆಡು ಕಳಿಂಗದಲ್ಲಿ ಕೋಣನಾಗಿ ಹುಟ್ಟಿತು. ಅದೊಮ್ಮೆ ಸಿಂಪಾನದಿಯಲ್ಲಿ ನೀರು ಕುಡಿಯಲು ಬಂದ ಅರಸನ ಕುದುರೆಯನ್ನು ಕೊಂದುದರಿಂದ, ಮುಳಿದ ಅರಸ ಅದನ್ನು

ಹಿಡಿತರಿಸಿ ವಿಚಿತ್ರವಾಗಿ ಕೊಲ್ಲಿಸಿದ; ಅದರ ಮಾಂಸವನ್ನು ಅಮೃತಮತಿಗೆ ಕೊಡಿಸಿದ. ಮಾಂಸದ ಸವಿಗಂಡ ಅಮೃತಮತಿ ಬಾಣಸದ ಮನೆಯಲ್ಲಿ ಕಟ್ಟಿದ್ದ ಪೋತವನ್ನೂ ಕೊಲ್ಲಿಸಿ ತಿಂದಳು. ಆಗ ದಾಸಿಯರು ಹೀಗೆಂದುಕೊಂಡರು– "ಇವಳ ಮೈಯೆಲ್ಲ ಕೆಟ್ಟು, ಕೀವು ಬಸಿಯುತ್ತಿದೆ; ತೊನ್ನಿನ ಕೂಟದಿಂದ ಇವಳಿಗೂ ತೊನ್ನು ಹತ್ತಿದೆ. ಆದರೂ ಅವಗುಣವನ್ನು ಇವಳು ಬಿಡಲಿಲ್ಲ! ಈ ನೀಚಳನ್ನು ಒಯ್ಯಲು ಯಮನೂ ಹೇಸಿದನೇನೋ! ನಾಯಕ ನರಕವೇ ಇವಳಿಗೆ ಇಷ್ಟವಾಯಿತು.

ಮದನನ ಮಾಜಿಂಕ[1]ದ ಚೆಂ
ದದ ಗಂಡನನ್ ಅಮೃತದನ್ನಳ್ ಅತ್ತೆಯನ್ ಇವಳ್ ಓ
ವದೆ[2] ಕೊಂದಳ್; ಪಾಪಂ ತಿ
ನ್ನದು. ಪಾತಕಿ ಪುಟ್ಟಿತೊಡಲ್ಲದೇಂ ಸತ್ತಪಳೇ !

ಈ ನುಡಿಯನ್ನು ಕೇಳಿದ ಪೋತ ತನ್ನ ಪ್ರಿಯೆಯಾಗಿದ್ದವಳು ಜಾರನನ್ನು ಕೂಡಿಕೊಂಡಿರುವುದನ್ನು ಕಂಡು ದುಃಖಿಸಿತು.

ಸತ್ತ ಕೋಣನೂ ಪೋತವೂ ಹೊಲಗೇರಿಯಲ್ಲಿ ಕೋಳಿ ಪಿಳ್ಳೆಗಳಾಗಿ ಹುಟ್ಟಿದುವು. ಅವುಗಳನ್ನು ಸಲಹಲೆಂದು ಯಶೋಮತಿ ಚಂಡಕರ್ಮನಿಗೆ ಕೊಟ್ಟ. ಒಮ್ಮೆ ಚಂಡಕರ್ಮ ವನದಲ್ಲಿ ಬರುತ್ತ, ತರುಮೂಲದಲ್ಲಿ ಆತ್ಮಚಿಂತಾಮಗ್ನನಾಗಿದ್ದ ಅಕಂಪನನೆಂಬ ಯೋಗೀಂದ್ರನನ್ನು ಕಂಡು ಆತನಿಗೆರಗಿದ. ಅವನು ಕಣ್ ತೆರೆದು ಹರಸಿದಾಗ, 'ಮನಸ್ಸಿನಲ್ಲಿ ನೀವೇನನ್ನು ನೆನೆಯುತ್ತಿದ್ದಿರಿ?' ಎಂದು ಚಂಡಕರ್ಮ ಪ್ರಶ್ನಿಸಿದ. "ಆತ್ಮನಂ ಅವಿಕಲ್ಪಂ ನೆನೆಯುತ್ತಿದ್ದೆವು" ಎಂದು ಅಕಂಪನ ಉತ್ತರಿಸಿದ. ಆಗ ಚಂಡಕರ್ಮ "ತನುವಲ್ಲದ ಆತ್ಮನಂ ಕಂಡಱಿಯೆಂ" ಎಂದು ಆತ್ಮನ ಅಸ್ತಿತ್ವದ ಬಗ್ಗೆ ತನ್ನ ಸಂಶಯವನ್ನು ಹೇಳಿಕೊಂಡ: 'ಜೀವನೆಂತುಂ ದೇಹಂ' ಎಂಬುದೇ ತನ್ನ ಅನುಭವವೆಂದ. ಅಕಂಪನ ಆತ್ಮ ತತ್ತ್ವವನ್ನು ಬೋಧಿಸಿ,

---

[1] ಮಾಜಿಂಕ=ಪ್ರತಿರೂಪ. [2] ಓವದೆ=ಪ್ರೀತಿಸದೆ.

ಅವನ ಸಂದೇಹವನ್ನು ನಿವಾರಿಸಿದ; "ದೇಹವೇ ಬೇರೆ, ಜೀವ ಅಥವಾ ಆತ್ಮವೇ ಬೇರೆ. ತರಿವರೆ, ಕಡಿದರೆ ಅಥವಾ ಸೀಳಿದರೆ ಕಟ್ಟಿಗೆಯಿಂದ ಬೆಂಕಿ ಹೊರಡುವುದಿಲ್ಲ; ಹೊಸೆದಾಗ ಹೊರಡುತ್ತದೆ. ಅಂತೆಯೇ ವಿವೇಕ ಕ್ರಿಯೆಯಿಂದ ದೇಹ–ಜೀವಗಳ ಭೇದ ತಿಳಿಯುತ್ತದೆ. ಕಲ್ಲಿನಲ್ಲಿ ಚಿನ್ನ, ಹಾಲಿನಲ್ಲಿ ತುಪ್ಪ ಇರುವಂತೆ ದೇಹದಲ್ಲಿ ಆತ್ಮನುಂಟು. ಆತನೇ ಎಲ್ಲಕ್ಕೂ ಕರ್ತ. ಪರಮಾತ್ಮನ ವಚನವೇ ಆಗಮ. ಜೀವದಯೆಯೇ ಧರ್ಮವೆಂದು ನಂಬುವುದು ಸಮ್ಯಕ್ತ್ವ. ಮೋಕ್ಷವನ್ನು ಬಯಸುವವನು ಪಂಚಾಣು ವ್ರತವನ್ನು ಪಾಲಿಸಬೇಕು. ಹಿಟ್ಟಿನ ಕೋಳಿಯನ್ನು ವಧಿಸಿದ್ದರಿಂದಲೇ ಯಶೋಧರ ಚಂದ್ರಮತಿಯರು ತಿರ್ಯಗ್ಗತಿಗಳಲ್ಲಿ ಬಳಲಿ, ನಿನ್ನ ಬಳಿ ಗೂಡಿನ ಕೋಳಿಗಳಾಗಿದ್ದಾರೆ. ಆದ್ದರಿಂದ ಪ್ರಾಣಿಹಿಂಸೆ ಸಲ್ಲದು; ಧರ್ಮವು ದಯಾಮೂಲವಾದುದು"–ಎಂದು ಅಕಂಪನಮುನಿ ಉಪದೇಶಿಸಿದ.

ಚಂಡಕರ್ಮನೊಡನಿದ್ದ ಕೋಳಿಗಳು ಋಷಿವಚನವನ್ನು ಕೇಳಿ ಜಾತಿಸ್ಮರಗಳಾಗಿ, ವ್ರತವನ್ನು ಧರಿಸಿ ಹರ್ಷದಿಂದ ಕೇಕೆ ಹಾಕಿದುವು. ಆ ಸಮಯದಲ್ಲಿ ಪತ್ನಿಯೊಡನೆ ವನವಿಹಾರಕ್ಕೆ ಬಂದಿದ್ದ ಯಶೋಮತಿ ಕೋಳಿಗಳ ಕೂಗನ್ನು ಕೇಳಿ ಸ್ವರವೇದವಿದ್ಯೆಯಿಂದ ಅವುಗಳನ್ನೆಚ್ಚ. ಅವು ಸಮಾಧಿಮರಣದಿಂದ ಮಡಿದು ಯಶೋಮತಿಯ ಮಕ್ಕಳಾಗಿ ಕುಸುಮಾವಳಿಯ ಬಸಿರಿನಲ್ಲಿ ಹುಟ್ಟಿದುವು. ಆ ಅವಳಿಮಕ್ಕಳೇ ಅಭಯರುಚಿ ಮತ್ತು ಅಭಯಮತಿ.

ಒಮ್ಮೆ ಯಶೋಮತಿ ಬೇಟೆಗೆ ಹೋಗಿದ್ದಾಗ, ಅವನಿಗೆ ಸಿಕ್ಕಿದ ಸುದತ್ತಾಚಾರ್ಯನೆಂಬ ಮುನಿ ಹೀಗೆ ಹೇಳಿದ: " ಯಶೌಘ ಮಹಾರಾಜ ಸ್ವರ್ಗದಲ್ಲಿ ದೇವನಾದ.. ನಿನ್ನ ತಂದೆಯಾದ ಯಶೋಧರ ಹಿಟ್ಟಿನ ಕೋಳಿಯನ್ನಿಳಿದು ಅನೇಕ ಭವಗಳಲ್ಲಿ ತೊಳಲಿ ಈಗ ಅಭಯರುಚಿಯಾಗಿದ್ದಾನೆ; ಚಂದ್ರಮತಿ ಅಭಯಮತಿಯಾಗಿದ್ದಾಳೆ. ಪಾತಕಿಯಾದ

ಅಮೃತಮತಿ ಮುಪ್ಪಡಸಿ, ಕುಷ್ಠರೋಗ ಹತ್ತಿ ಸತ್ತು ಧೂಮಪ್ರಭೆಯೆಂಬ ಪಂಚಮನರಕದಲ್ಲಿ ಬಿದ್ದಿದ್ದಾಳೆ." ಇದನ್ನು ಕೇಳಿದ ಯಶೋಮತಿ ಕೇವಲ ಸಂಕಲ್ಪ ವಧೆಯ ಪರಿಣಾಮ ಇಷ್ಟಾಯಿತೆ ಎಂದು ವಿಸ್ಮಯಗೊಂಡು ಜೈನದೀಕ್ಷೆ ಸ್ವೀಕರಿಸಿದ. ಅನಂತರ ಅಭಯರುಚಿ ಅಭಯಮತಿಯರು ಸುದತ್ತಾಚಾರ್ಯನಲ್ಲಿ ಶಿಷ್ಯವೃತ್ತಿಯನ್ನು ವಹಿಸಿದರು.

(೪) "ನಾನೇ ಆ ಅಭಯರುಚಿ, ಈ ಅಕ್ಕನೇ ಅಭಯಮತಿ. ಸಂಕಲ್ಪಹಿಂಸೆಯಿಂದ ನಾವಿಷ್ಟು ಭವದುಃಖವನ್ನುಂಡೆವು. ನೀನು ನಿಶ್ಚಿಂತೆಯಿಂದ ಇಷ್ಟೊಂದು ಪ್ರಾಣಿಗಳನ್ನು ಕೊಲ್ಲುತ್ತಿರುವೆಯಲ್ಲ! ನಾನು ನಮಗಾಗಿ ಎಳ್ಳನಿತೂ ಹೆದರುವುದಿಲ್ಲ; ಆದರೆ ನಿನ್ನ ಕೇಡನ್ನು ಕಂಡು ತಲ್ಲಣಿಸುತ್ತೇನೆ" ಎಂದು ಅಭಯರುಚಿ ಮಾರಿದತ್ತನಿಗೆ ನುಡಿದ. ಕಥೆಯನ್ನು ಕೇಳಿದ ಮಾರಿದತ್ತ ಬಿಲ್ಲುಂಬೆರಗಾಗಿ ಉದ್ವೇಗಪರನಾದ. ಆಗ ಚಂಡಮಾರಿ ಪ್ರತ್ಯಕ್ಷಳಾಗಿ, "ನನಗೆ ಸಾತ್ವಿಕಪೂಜೆಯೆ ಸಾಕು. ಇನ್ನು ಮೇಲೆ ಜೀವ ಬಲಿಯನ್ನಿತ್ತರೆ ಮುನಿಯುತ್ತೇನೆ" ಎಂದು ಜಾತ್ರೆಗೆ ಸಾರಿ ಹೇಳಿದಳು. ಮಾರಿದತ್ತ ದೀಕ್ಷೆ ಕೈಕೊಂಡು ಉಗ್ರತಪಸ್ಸಿನಿಂದ ದೇವನಾದ. ಅಭಯರುಚಿ ಅಭಯಮತಿಯರು ತಪಸ್ಸನ್ನೆಸಗಿ ಈಶಾನ ಕಲ್ಪದಲ್ಲಿ ದೇವತೆಗಳಾದರು. "ಧರ್ಮದಿಂದಾಗದುದೇಂ ?"

## ಯಶೋಧರ ಕಥೆಯ ಆಕರಗಳು

ಯಶೋಧರನ ಕಥೆ ಜನ್ನನ ಸ್ವಂತ ಸೃಷ್ಟಿಯಲ್ಲ; ಅದು ಜೈನ ಸಂಪ್ರದಾಯದಲ್ಲಿ ಬಹು ವಿಖ್ಯಾತವಾದ ಮತ್ತು ಜನಪ್ರಿಯವಾದ ಕಥೆ. ಜೈನರು ಜೀವದಯಾಷ್ಟಮಿ ನೋಂಪಿಯ ಆಚರಣೆಯ ಕಾಲದಲ್ಲಿ ಈ ಕಥೆಯನ್ನು ಪಾರಾಯಣ ಮಾಡುತ್ತಾರೆ. ಕ್ರಿ.ಶ. ೬೫೦ರಿಂದಲೂ ಇದು ಸಂಸ್ಕೃತ, ಪ್ರಾಕೃತಗಳಲ್ಲಿ ಭಿನ್ನಭಿನ್ನ ರೀತಿಯಲ್ಲಿ ನಿರೂಪಣೆಗೊಳ್ಳುತ್ತಾ

ಬಂದಿದೆ. ಜನ್ನನಿಗಿಂತ ಮುನ್ನ ಕನ್ನಡದಲ್ಲೂ ಯಶೋಧರ ವಿಷಯಕವಾದ ಕೃತಿರಚನೆಯಾಗಿರಬೇಕೆಂದು ಅವನ ಮಾತಿನಿಂದಲೇ ಸೂಚಿತವಾಗುತ್ತದೆ; ಆದರೆ ಅಂಥ ಯಾವ ಕೃತಿಯೂ ದೊರೆತಿಲ್ಲ.

ಮೂಲಸ್ವರೂಪದಲ್ಲಿ ಯಶೋಧರನ ಕಥೆ ಹೆಣ್ಣಿನ ದ್ರೋಹವನ್ನು ಚಿತ್ರಿಸುವ ಒಂದು ಜನಪದ ಕಥೆಯಾಗಿದ್ದಿರಬೇಕು; ಅನಂತರ ಅದು ಕವಿಗಳ ಕೈಯಲ್ಲಿ ಧಾರ್ಮಿಕ, ನೈತಿಕ ಉದ್ದೇಶಗಳಿಗಾಗಿ ಬಳಕೆಗೊಂಡಿರಬೇಕು. ಈ ದೃಷ್ಟಿಯಿಂದ, ಯಶೋಧರನ ಕಥೆಯ ಮೂಲವನ್ನು ಕ್ರಿಸ್ತಶಕದ ಪ್ರಾರಂಭಕ್ಕೆ ಕೊಂಡೊಯ್ಯಬಹುದು ಎಂಬ ಅಭಿಪ್ರಾಯವಿದೆ. ಭಾರತದ ಜಾನಪದ ಕಥೆಗಳ ಭಂಡಾರ ಕವಿಗಳಿಗೆ ಮತ್ತು ನೀತಿಬೋಧಕರಿಗೆ ವಿಪುಲ ಸಾಮಗ್ರಿಯನ್ನೊದಗಿಸತೊಡಗಿದ್ದು ಆ ಕಾಲದಲ್ಲಿಯೆ. ಈ ಕಥೆಗಳು ದ್ರಾವಿಡ ಮೂಲವನ್ನುಳ್ಳವೆಂದೂ ಹೇಳಬಹುದು. ಏಕೆಂದರೆ ಅವನ್ನು ನಾವು ಕಾಣುವುದು ಗುಣಾಢ್ಯ, ದಂಡಿ ಮುಂತಾದ ದಾಕ್ಷಿಣಾತ್ಯ ಲೇಖಕರಲ್ಲಿ ಮಾತ್ರ. ಪಶುಪಕ್ಷಿಗಳು ಭಾರತೀಯ ಜನಪದ ಕಥಾಸಾಹಿತ್ಯದಲ್ಲಿ ಪ್ರಮುಖ ಪಾತ್ರವಹಿಸುತ್ತವೆಂಬುದನ್ನೂ 'ಯಶೋಧರಚರಿತೆ'ಯ ಘಟನಾವಳಿಯಲ್ಲಿ ಪಶುಪಕ್ಷಿಗಳು ವಿಶೇಷವಾಗಿ ಕಾಣಿಸಿಕೊಳ್ಳುವುದನ್ನು ಗಮನಿಸಬಹುದು.

ಯಶೋಧರನ ಕಥೆ ಮೊಟ್ಟಮೊದಲು ಗ್ರಂಥರೂಪ ಧರಿಸಿದ್ದು ಪ್ರಭಂಜನನ ಕೃತಿಯಲ್ಲಿ ಎಂದು ಊಹಿಸಲಾಗಿದೆ. ಅವನ ಕಾಲ ಪ್ರಾಯಶಃ ಕ್ರಿ.ಶ.೬೫೦; ಆ ಕೃತಿ ಪ್ರಾಕೃತದಲ್ಲಿದ್ದಿರಬಹುದು, ಆದರೆ ಸಿಕ್ಕಿಲ್ಲ. ಪ್ರಭಂಜನನಿಗಿಂತ ಎಷ್ಟು ಹಿಂದೆ ಈ ಕಥೆ ಪ್ರಚಲಿತವಾಗಿತ್ತೆಂಬುದನ್ನು ತಿಳಿಯಲು ಆಧಾರ ಸಾಲದು. ಆದರೆ ಸ್ತ್ರೀಯರ ದುರ್ವ್ಯಾಪಾರಗಳಿಗೆ ಸಂಬಂಧಿಸಿದ ಇಂತಹ ಆಖ್ಯಾನಗಳು ಸಂಸ್ಕೃತ ಪ್ರಾಕೃತಗಳಲ್ಲಿ ಬೇಕಾದಷ್ಟಿವೆ.

ಪ್ರಭಂಜನನ ತರುವಾಯ ಹರಿಭದ್ರನ 'ಸಮರಾಯಿಚ್ಚಕಹಾ'

(ಸಮರಾದಿತ್ಯಕಥಾ) ಎಂಬ ಪ್ರಾಕೃತಗ್ರಂಥದಲ್ಲಿ ಯಶೋಧರನ ಕಥೆ ಬರುತ್ತವೆ. ಅಲ್ಲಿ ಮಾರಿದತ್ತನ ಮತ್ತು ಪ್ರಾಣವಧೆಯ ಪ್ರಸ್ತಾಪವಿಲ್ಲ. ಪಾತ್ರಗಳ ಹೆಸರುಗಳೆಲ್ಲ ಬೇರೆಯಾಗಿವೆ. ಹರಿಭದ್ರನ ಪ್ರಕಾರ, ರಾಜನಿಗೆ ನಿಜವಾಗಿಯೂ ಕನಸು ಬೀಳುತ್ತದೆ. ಆದರೆ ಅವನದನ್ನು ಬೇರೆ ರೀತಿಯಲ್ಲಿ ತಿಳಿಸುತ್ತಾನೆ. ರಾಣಿ ತನ್ನ ಗಂಡನನ್ನು ವಿಷಹಾಕಿ ಕೊಲ್ಲುತ್ತಾಳೆ ಮಾತ್ರವಲ್ಲ. ಅವನ ಕೊರಳು ಹಿಸುಕುವ ಕೆಲಸವನ್ನು ಕೂಡ ಮಾಡುತ್ತಾಳೆ. ಕಥೆಯ ಮುಕ್ತಾಯವೂ ಅಲ್ಲಿ ಭಿನ್ನವಾಗಿದೆ. ಅಭಯರುಚಿಗೆ ಸ್ವರ್ಗಪ್ರಾಪ್ತಿ ಯಾದಲ್ಲಿಗೇ ಕಥೆ ನಿಲ್ಲದೆ, ಮತ್ತೆ ಅವನು ಯಶೋಧರನಾಗಿ ಹುಟ್ಟಿ ವೈರಾಗ್ಯಗೊಂಡುದನ್ನು ಬಣ್ಣಿಸುತ್ತದೆ. ಮಾವುತನ ಹಾಡಿನ ವಿಷಯ ಹರಿಭದ್ರನಲ್ಲಿಲ್ಲ.

ಸೋಮದೇವನ 'ಯಶಸ್ತಿಲಕ ಚಂಪು' (ಸಂಸ್ಕೃತ) ಮತ್ತು ಪುಷ್ಪದಂತನ 'ಜಸಹರಚರಿಉ'(ಪ್ರಾಕೃತ) ಸುಮಾರು ೧೦ನೆಯ ಶತಮಾನದ ಆದಿಯಲ್ಲಿ ರಚಿತವಾದವು. ವ್ಯಕ್ತಿಗಳ ಹೆಸರುಗಳನ್ನು ಬಿಟ್ಟರೆ, ಇವುಗಳಲ್ಲಿ ಕೂಡ ಕಥೆ ಬೇರೆ ಬಗೆಯದಾಗಿದೆ. ಈ ಎರಡು ಗ್ರಂಥಗಳಲ್ಲಿಯೂ ಮಾರಿದತ್ತನಿಗೆ ಭೈರವಾನಂದನೆಂಬ ಶೈವಗುರುವಿದ್ದು, ಜೀವಬಲಿಯನ್ನು ಪ್ರಚೋದಿಸುತ್ತಾನೆ. ಗೀತದ ಪ್ರಸ್ತಾಪ ಸೋಮದೇವನಲ್ಲಿದೆ. ಆದರೂ ಮುಂದೆ ಬಂದ ವಾದಿರಾಜನಿಗೆ ಪುಷ್ಪದಂತನ ಕೃತಿಯೆ ಮಾದರಿಯಾದಂತೆ ತೋರುತ್ತದೆ. 'ಯಶೋಧರ ಚಂಪು'ವಿನಲ್ಲಿ ಕಲಾತ್ಮಕ ಐಕ್ಯವಿಲ್ಲ; ಧಾರ್ಮಿಕ, ತಾತ್ತ್ವಿಕ ಅಂಶಗಳು ದಟ್ಟವಾಗಿ ತುಂಬಿಕೊಂಡಿರುವ ಪ್ರೌಢ ಕಾವ್ಯವದು.

ಕ್ರಿ.ಶ. ೯೩೨ರಲ್ಲಿದ್ದ ಹರಿಷೇಣ ರಚಿಸಿದ 'ಬೃಹತ್ಕಥಾ ಕೋಶ'ದಲ್ಲಿ ಯಶೋಧರ-ಚಂದ್ರಮತೀ ಕಥಾನಕವಿದೆ. ಅಕಂಪನಮುನಿ ಚಂಡಕರ್ಮನಿಗೆ ನೀಡಿದ ಉಪದೇಶದಲ್ಲಿ ಈ ಕೃತಿಯ ಪ್ರಭಾವವನ್ನು ಗುರುತಿಸಬಹುದು.

ಹಿಂದಿನವರಲ್ಲಿ ಬಹುಮಟ್ಟಿಗೆ ಧಾರ್ಮಿಕ ಸ್ವರೂಪದ ಕಥೆಯಷ್ಟೇ ಆಗಿದ್ದ ಯಶೋಧರಾಖ್ಯಾನವನ್ನು ತೆಗೆದುಕೊಂಡು, ಅದರ ಅಸಂಗತಾಂಶಗಳನ್ನೆಲ್ಲ ನಿವಾರಿಸಿ, ಉಚಿತ ಮಾರ್ಪಾಡುಗಳನ್ನು ಮಾಡಿಕೊಂಡು ಅದನ್ನೊಂದು ರಸಸ್ಯಂದಿಯಾದ ಕಾವ್ಯವಾಗಿ ಪರಿವರ್ತಿಸಿದ ಕೀರ್ತಿ ವಾದಿರಾಜನದು. ಈತ ಕ್ರಿ.ಶ. ಸುಮಾರು ೧೦೫೦ರಲ್ಲಿ ಕರ್ನಾಟಕದಲ್ಲಿ ಬದುಕಿದ್ದ ಜೈನಗುರು. ಇವನ ಸಂಸ್ಕೃತ 'ಯಶೋಧರ ಚರಿತ'ವೆ ನಮ್ಮ ಜನ್ನನಿಗೆ ಪ್ರತ್ಯಕ್ಷ ಮೂಲ. ಆದ್ದರಿಂದ, ವಾದಿರಾಜ–ಜನ್ನರ ಕೃತಿಗಳನ್ನು ಸ್ವಲ್ಪಮಟ್ಟಿಗೆ ತುಲನಾತ್ಮಕವಾಗಿ ಅವಲೋಕಿಸುವುದು ಅವಶ್ಯಕ.

## ವಾದಿರಾಜ ಮತ್ತು ಜನ್ನ

ಯಶೋಧರನ ಕಥೆಗೆ ಹಿಂದಿಲ್ಲದ ಕಲಾತ್ಮಕ ಐಕ್ಯ ಮತ್ತು ಮಾನವೀಯ ಸ್ವಾರಸ್ಯವನ್ನು ತಂದುಕೊಂಡದ್ದು ವಾದಿರಾಜನ ಹಿರಿಮೆ. ಅವನ ಕಾವ್ಯದಲ್ಲಿ ಯಶೋಧರನ ಉದ್ಧಾರದ ಕಥೆಯಷ್ಟೇ ಅಮೃತಮತಿಯ ಪತನದ ಕಥೆಯೂ ಮುಖ್ಯವಾಗಿದೆ. ಈ ದೃಷ್ಟಿಯಿಂದ ಸಂಸ್ಕೃತ ಸಾಹಿತ್ಯದಲ್ಲಿ ವಾದಿರಾಜ ಹಿಡಿದ ಹಾದಿ ಹೊಸದು. ಅವನಿಗಿಂತ ಹಿಂದಿನ ಸಂಸ್ಕೃತ ಕಾವ್ಯನಾಟಕಗಳಲ್ಲಿ ಪುರಾಣೇತಿಹಾಸಗಳಿಂದೆತ್ತಿಕೊಂಡ ವಸ್ತು ಮತ್ತು ಉದಾತ್ತನಾಯಕ ನಾಯಿಕೆಯರು ಮಾತ್ರ ಸುಳಿಯಲು ಅವಕಾಶವಿತ್ತು. ಆ ಸಿದ್ಧಸಂಪ್ರದಾಯವನ್ನು ಬದಿಗೊತ್ತಿ, ಜನಜೀವನಕ್ಕೆ ಹತ್ತಿರವಾದ ವಸ್ತುವನ್ನಾರಿಸಿಕೊಂಡು ಕಾವ್ಯ ಬರೆದವನು ವಾದಿರಾಜ. ವಸ್ತುವಿನಲ್ಲಿ ಮಾತ್ರವಲ್ಲ, ನಿರೂಪಣೆಯಲ್ಲೂ ಅವನ ರೀತಿ ನವೀನವಾದುದು. ಮಹಾಕಾವ್ಯಗಳ ಸಾಂಪ್ರದಾಯಿಕ ಲಕ್ಷಣಗಳನ್ನೆಲ್ಲ ಪಾಲಿಸುವ ಹಟ ತೊಡದೆ, ಸರಳ ಸುಂದರವಾಗಿ ಅವನು ತನ್ನ 'ಮಹಾಕಾವ್ಯ'ವನ್ನು ರಚಿಸಿದ್ದಾನೆ. ಹೀಗಾಗಿ, ಒಂದೇ ಜಾಡನ್ನು ತುಳಿದು ತುಳಿದು

ವ್ಯಾಧಿಗ್ರಸ್ತವಾಗಿದ್ದ ಸಂಸ್ಕೃತ ವಾಙ್ಮಯಕ್ಕೆ ಒಂದಿಷ್ಟು ಹೊಸ ರಕ್ತವನ್ನು ನೀಡಿದ ವಿಶಿಷ್ಟ ಕೃತಿಯೆಂದು ವಾದಿರಾಜನ 'ಯಶೋಧರಚರಿತ' ಗಣ್ಯವಾಗಿದೆ. ಸಂಸ್ಕೃತದಲ್ಲಿ ಅದಕ್ಕೆ ಯಾವ ವೈಶಿಷ್ಟ್ಯವಿದೆಯೋ ಅದೇ ವೈಶಿಷ್ಟ್ಯ ಕನ್ನಡದಲ್ಲಿ ಜನ್ನನ ಕೃತಿಗಿದೆ.

ಜನ್ನನಿಗೆ ವಾದಿರಾಜನೇ ಮೂಲವೆನ್ನುವುದು ನಿರ್ವಿವಾದ. ಹೆಜ್ಜೆಹೆಜ್ಜೆಗೂ ಜನ್ನ ವಾದಿರಾಜನ ಕಥೆಯನ್ನು ಅನುಸರಿಸಿದ್ದಾನೆ. ವಾದಿರಾಜನಲ್ಲಿ ನಾಲ್ಕು ಸರ್ಗಗಳು, ೨೯೪ ಪದ್ಯಗಳು; ಜನ್ನನಲ್ಲಿ ನಾಲ್ಕು ಅವತಾರಗಳು, ೩೧೦ ಪದ್ಯಗಳು. ಇಷ್ಟರಿಂದಲೇ ಆ ಎರಡು ಕೃತಿಗಳ ಸಾಮ್ಯ ಎದ್ದು ಕಾಣುತ್ತದೆ. ಆದರೆ ಜನ್ನನದು ವಾದಿರಾಜನ ಕಾವ್ಯದ ಪ್ರತಿಕೃತಿಯಲ್ಲ. ಕಥೆಯ ಚೌಕಟ್ಟು ಮಾತ್ರ ವಾದಿರಾಜನಿಂದ ಬಂದದ್ದು ನಿಜ. ಆದರೆ ಅದರ ತಿರುಳೆಲ್ಲ ಜನ್ನನ ಸ್ವಪ್ರತಿಭೆಯಿಂದ ಅರಳಿನಿಂತು, ಸ್ವತಂತ್ರ ಕನ್ನಡಕಾವ್ಯದ ಸತ್ವ ಅದಕ್ಕೆ ದೊರೆಕೊಂಡಿದೆ. ಅನ್ಯಭಾಷಾಕೃತಿಯಿಂದೆತ್ತಿಕೊಂಡ ವಸ್ತುವೊಂದನ್ನು ತಾಯ್ನುಡಿಯಲ್ಲಿ ಎಷ್ಟು ಚೆನ್ನಾಗಿ ನಿರ್ವಹಿಸಬಹುದೋ ಅಷ್ಟು ಚೆನ್ನಾಗಿ ನಿರ್ವಹಿಸಿ ಯಶಸ್ವಿಯಾಗಿದ್ದಾನೆ ಜನ್ನ. ಕೆಲವೆಡೆ ಮೂಲವನ್ನು ಸೊಗಸಾಗಿ ಅನುವಾದಿಸಿ ತನ್ನ ಭಾಷಾಂತರಶಕ್ತಿಯನ್ನು ಮೆರೆದಿದ್ದಾನೆ, ಕೆಲವೆಡೆ ಮೂಲದ ಸೌಂದರ್ಯವನ್ನು ಹೆಚ್ಚಿಸಿದ್ದಾನೆ. ಎಷ್ಟೋ ಕಡೆ ಮೂಲವನ್ನು ಅಂದವಾಗಿ ಸಂಗ್ರಹಿಸಿದ್ದಾನೆ, ಅವಶ್ಯವಾದೆಡೆ ವಿಸ್ತರಿಸಿದ್ದಾನೆ. ಕಥೆಗೆ ಕೆಲವು ಅಂಶಗಳು ಹೊಸದಾಗಿ ಸೇರಿವೆ. ಸೂಕ್ಷ್ಮವಾದ ಕೆಲವು ಮಾರ್ಪಾಟು ಗಳಾಗಿವೆ. ಮೂಲದ ಕೆಲವು ಅನೌಚಿತ್ಯಗಳು ಹೋಗಿವೆ. ಇಂತಹ ಕಡೆಗಳಲ್ಲೆಲ್ಲ ಜನ್ನನ ಔಚಿತ್ಯಪ್ರಜ್ಞೆ ವಿಶೇಷವಾಗಿ ಕಂಡುಬರುತ್ತದೆ. ಅವನ ಉಪಮೆ ರೂಪಕಗಳೆಲ್ಲ ನೂತನ, ವಿಶಿಷ್ಟ. ಜೊತೆಗೆ ಕನ್ನಡದ ಗಾದೆಗಳು, ದೇಸಿ ನುಡಿಗಳು ಜನ್ನನ ಕಾವ್ಯಕ್ಕೆ ಅತಿಶಯವಾದ ಮೆರುಗು ಕೊಟ್ಟಿವೆ. ಒಟ್ಟಿನಲ್ಲಿ ಜನ್ನನ ಜಾಣ್ಮೆಯಿಂದ ಸಂಸ್ಕೃತದ ವಸ್ತು ಕನ್ನಡದಲ್ಲಿ

ಮರುಹುಟ್ಟು ಪಡೆದಿದೆ. "ಜನ್ನನು ತನ್ನ ಕಾವ್ಯದ ಪ್ರತಿಯೊಂದು ಪದ್ಯವನ್ನೂ ವಾದಿರಾಜನ ಕಾವ್ಯದ ಪದ್ಯಗಳನ್ನೇ ಮನಸ್ಸಿನಲ್ಲಿಟ್ಟುಕೊಂಡು ಬರೆದಿದ್ದರೂ ತಾನು ಮುಟ್ಟಿದುದೆಲ್ಲವನ್ನೂ ಚಿನ್ನವನ್ನಾಗಿ ಮಾಡಿರುವನು" ಎಂಬ ಪ್ರಶಂಸೆ ಸಮರ್ಪಕವಾಗಿದೆ. ಇನ್ನು, ಇಬ್ಬರು ಕವಿಗಳನ್ನೂ ಕೆಲವು ನಿದರ್ಶನಗಳಿಂದ ಹೋಲಿಸಿ ನೋಡಬಹುದು.

**ಮೊದಲನೆಯ ಅವತಾರ:**–ಜನ್ನ ಮೂಲಭಾವವನ್ನು ಸಮಂಜಸವಾಗಿ ಗ್ರಹಿಸಿ ಕನ್ನಡದಲ್ಲಿ ಅನುವಾದಿಸಬಲ್ಲ ಸಮರ್ಥ. ಚಂಡಕರ್ಮ ಬಂದು ಹಿಡಿದಾಗ, ಅಭಯರುಚಿ ತಂಗಿಯನ್ನು ಸಂತೈಸುತ್ತಾ ಹೀಗೆನ್ನುತ್ತಾನೆ:

ತಸ್ಮಾದವಶ್ಯಮನುಭೋಕ್ತವ್ಯೇ ಕಿಮುದ್ವೇಗಃ ಕರಿಷ್ಯತೇ
ಕಿಂಚ ತೀವ್ರಂ ತಪಃ ಪ್ರಾಹುಃ ಪರೀಷಹಜಯಂ ಬುಧಾಃ

ಇದನ್ನು ಜನ್ನ "ನಿಯತಿಯನ್ ಆರ್ ಮೀಱಿದಪರ್ ? ಭಯಮೇವುದೋ? ಮುಟ್ಟಿದೆಡೆಗೆ ಸೈರಿಸುವುದೆ ಕೇಳ್ ನಯವಿದೆ. ಪೆತ್ತ ಪರೀಷಹಜಯಮೆ ತಪಂ; ತಪಕೆ ಬೇರೆ ಕೋಡೆರಡೊಳವೇ?" ಎಂದು ಭಾಷಾಂತರಿಸಿದ್ದಾನೆ. 'ತಪಕೆ ಬೇರೆ ಕೋಡೆರಡೊಳವೇ' ಎಂಬ ದೇಸಿ ಮಾತು ಹೊಸದು. ಅರ್ಥಪುಷ್ಟಿಗಾಗಿ ಜನ್ನ ಸೇರಿಸಿದ್ದು. "ಸುಖಿಮನಱಿಸುವ ಮನುಜಂ ಪೊರಡಿಯೊಳ್ ಪಾಮುಪಳಮಱಿಸದಿರಂ" ಎಂಬ ಅಭಯಮತಿಯ ಮಾತು ವಾದಿರಾಜನದಲ್ಲ. ಅಣ್ಣತಂಗಿಯರ ಧೃತಿಯನ್ನು ಕಂಡು ಮಾರಿದತ್ತ ವಿಸ್ಮಿತನಾದ ಸಂಗತಿ ಮೂಲದಲ್ಲಿ ಹೀಗೆ ಬರುತ್ತದೆ:

ಅಪಿ ಚೋತ್ಪಾತ ಖಡ್ಗಂ ಮಾಂ ದೃಷ್ಟ್ವಾ ದೇವೀಂ ಚ ನಿಷ್ಠುರಾಂ
ನ ಚಿತ್ರಮನಯೋಽತ್ರಸ್ತಮಹೋ ಶೌರ್ಯಮನುತ್ತರಂ

ಇದನ್ನು ಜನ್ನ ಸಮರ್ಪಕವಾಗಿ ಅನುವಾದಿಸುವ ಬಗೆಯಿದು: "ಕಿಟ್ಟಿ ಕರವಾಳ್ಗಂ, ಎನಗಂ, ಮಿಟ್ಟುವಿನಂತಿರ್ದ ಮಾರಿಗಂ ಬೆದಱದೆ ನಿಂದು

ಅಟ್ಟಿಯನೆ ನುಡಿದರ್; ಇವರ ನೆಗಟ್ತೆ ಕರಂ ಪಿರಿದು ! ಧೀರರ್ ಅಕಟ ಕುಮಾರರ್ !"

ಜನ್ನನ ವಸಂತವರ್ಣನೆ ವಿಶಿಷ್ಟವೂ ಉಜ್ವಲವೂ ಆಗಿದೆ; ಮೂಲದಲ್ಲಿ ಅದರ ಸೂಚನೆಯಿದ್ದರೂ ಸಪ್ಪೆಯಾಗಿದೆ, ಬೇರೆ ತೆರನಾಗಿದೆ. "ಮಾವಿನಮರದಲ್ಲಿದ್ದ ಕೋಗಿಲೆಗಳು ವಸಂತ ತಂದ ಮಾಂಸ ನೈವೇದ್ಯ ದಂತಿದ್ದುವು" ಎನ್ನುತ್ತಾನೆ ವಾದಿರಾಜ. ಸುದತ್ತಾಚಾರ್ಯರ ಮಹಿಮೆ ಮೂಲ ದಲ್ಲಿ ತುಸು ವಿಸ್ತಾರವಾಗಿ ಬಂದಿದೆ; ಆದರೆ ಜನ್ನ "ಅವರ ಪೆಸರ್‌ಗೊಂಡ ನಾಲಗೆ ಸವಿವಡೆಯದು ಬಟ್ಟೆಕ ತಾಯ ಮೊಲೆವಾಲ್‌ವನಿಯುಂ" ಎಂಬ ನುಡಿಯಲ್ಲಿ ಅದನ್ನು ಅನುಪಮವಾಗಿ ಸಂಗ್ರಹಿಸಿದ್ದಾನೆ. ಅಧರ್ಮರಸಿಕರಿಗೆ ತಮ್ಮ ಕತೆ ಹಿಡಿಸುವುದಿಲ್ಲವೆನ್ನುವ ಅಭಯರುಚಿ,'ಜ್ವರ ಬಂದವರಿಗೆ ಹಾಲು ರುಚಿಸುವುದಿಲ್ಲ' ಎಂದು ಮೂಲದಲ್ಲಿ ಹೇಳುತ್ತಾನೆ; ಜನ್ನನಲ್ಲಿ ಅದು ಭಿನ್ನವಾಗಿ "ತುಪ್ಪೇಜಿದ ದರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ?" ಎಂದು ಬರುತ್ತದೆ.

ಎರಡನೆಯ ಅವತಾರ :– ಯಶೋಧರ ನೃಪನ ವರ್ಣನೆ ಮೂಲದಲ್ಲಿ ನಾಲ್ಕಾರು ಪದ್ಯಗಳಷ್ಟು ವಿವರವಾಗಿದೆ; ಜನ್ನ ಅದನ್ನೆಲ್ಲ "ನೋಡುವ ಕಣ್ಗಳ ಸಿರಿ..." ಎಂದು ಮೊದಲಾಗುವ ಒಂದೇ ಪದ್ಯದಲ್ಲಿ ಅಡಕಗೊಳಿಸಿದ್ದಾನೆ. ಯಶೋಧರನಲ್ಲಿ ಮಧ್ಯಮ ಅಥವಾ ಜಘನ್ಯ ಗುಣಗಳಿರಲಿಲ್ಲ, ಆದ್ದರಿಂದ ಕಾಮಿನಿಯರು ಅವನಲ್ಲಿ ತೃಪ್ತಿಗೊಳ್ಳುತ್ತಿರ ಲಿಲ್ಲ ಎಂಬುದು ವಾದಿರಾಜನ ಹೇಳಿಕೆ; ಜನ್ನನಲ್ಲಿ ಅಂತಹ ಮಾತಿಲ್ಲ. ವಾದಿರಾಜನಲ್ಲಿ ಶೃಂಗಾರ ವರ್ಣನೆ ತುಸು ಅತಿಯಾಗಿದೆ; ಜನ್ನ ಅದನ್ನು ನಿವಾರಿಸಿದ್ದಾನೆ. ಜಾರನೆಡೆಗೆ ಹೊರಟ ಹೆಂಡತಿಯನ್ನು ಹಿಂಬಾಲಿಸಿ ಹೋದ ಯಶೋಧರನಿಗೆ, ಅವರಿಬ್ಬರ ಕೂಟವನ್ನು ಕಣ್ಣಾರ ನೋಡಿದ ಮೇಲೆ ರೋಷ ಉಕ್ಕಿತೆಂದು ವಾದಿರಾಜನ ವರ್ಣನೆ. ಇದು ದೊಡ್ಡ ಅನೌಚಿತ್ಯ.

ಜನ್ನನಲ್ಲಿ ಆ ಸನ್ನಿವೇಶ ಬಹು ಸಹಜವಾಗಿ ನಯವಾಗಿ ನಾಟಕೀಯವಾಗಿ ಚಿತ್ರಿತವಾಗಿದೆ. ವಾದಿರಾಜನ ಯಶೋಧರ "ಹೆಣ್ಣು ವಿಕೃತಳಾದರೂ ಅವಳನ್ನು ಕೊಲ್ಲತಕ್ಕದ್ದಲ್ಲ" ಎಂದುಕೊಳ್ಳುತ್ತಾನೆ; ಆ ಭಾವನೆಯನ್ನು ಜನ್ನ "ಪೆಣ್ ತಪ್ಪಿ ನಡೆಯೆ ಚೀ ಕಿಸುಗುಳಂ ಎಂದು ಉಟಿಪುವದೆ ಗೆಲ್ಲಂ; ಕೊಂದು, ಆ ಪುಟು ಪುಟ್ಟುವ ನರಕದೊಳಗೆ ಬೀಟ್ವುದೆ ಚದುರಂ?" ಎಂದು ರಮ್ಯವಾಗಿ ಹಿಗ್ಗಿಸಿದ್ದಾನೆ.

ಅಮೃತಮತಿಯ ಪಾತ್ರಕ್ಕೆ ಜನ್ನನ ಕೈಯಲ್ಲಿ ಹೆಚ್ಚಿನ ಕಳೆ, ಜೀವಂತಿಕೆ ಬಂದಿವೆ. ಮಾವಟಿಗನ ಹಾಡಿಗೆ ವಶಳಾಗಿ ಮನಸ್ಸು ತೆತ್ತಮೇಲೆ ಅವಳ ಅವಸ್ಥೆಯನ್ನು ಬಣ್ಣಿಸುವ "ಪುಳಿಂದನ ಕಣೆಗಟ್ಟಿನಿಂದ ವನ ಹರಿಣಿಯವೊಲ್" ಎಂಬ ಸಾರ್ಥಕ ಉಪಮೆ ಜನ್ನನದು. 'ಬೆಂದ ಬಿದಿಗೆ ಕಣ್ಣೆಲ್ಲಕ್ಕುಂ', 'ಪೊಲ್ಲಮೆಯ ಲೇಸು ನಲ್ಲರ ಮೆಯ್ಯೊಳ್' ಎಂಬ ಮಾತು ಗಳೂ ಮೂಲದಲ್ಲಿಲ್ಲ. 'ಸ್ತ್ರೀಣಾಮಪಾತ್ರೇಽಭಿರತಿಃ ಸ್ವಭಾವಃ' ಎಂಬ ವಾದಿರಾಜನ ಉಕ್ತಿ ಜನ್ನನಲ್ಲಿ "ಚಿತ್ರಮಪಾತ್ರೇ ರಮತೇ ನಾರೀ" ಎಂದು ಸಂಸ್ಕೃತವಾಗಿಯೇ ನಿಂತಿದೆ. ಅಷ್ಟವಂಕ ರಾಣಿಯನ್ನು ಬಡಿದಾಗ, ಅವಳು 'ರಾಹುಪೀಡಿತವಾದ ಚಂದ್ರಕಾಂತಿಯಂತೆ' ಇದ್ದಳೆಂದು ವಾದಿರಾಜ ಅಮೂರ್ತವಾಗಿ ಬಣ್ಣಿಸಿದರೆ,"ಕೇರೆ ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್" ಎಂದು ಜನ್ನ ಮೂರ್ತವಾಗಿ ಬಣ್ಣಿಸಿ ಅನುಭವಜನ್ಯ ಚಿತ್ರವೊಂದನ್ನು ಕಣ್ಣಮುಂದೆ ಹಿಡಿಯುತ್ತಾನೆ. ಅಮೃತಮತಿ ದೊರೆಯೊಡನೆ ಸಿಂಹಾಸನ ದಲ್ಲಿ ಕುಳಿತಿದ್ದುದರಿಂದ ತಡವಾಯಿತೆನ್ನುವುದು ವಾದಿರಾಜನಲ್ಲಿರುವ ಕಾರಣ; ಸಿಂಹಾಸನದಲ್ಲೇನು, ಅತ್ತಿತ್ತ ಅಲುಗದಂತೆ ಅರಸನ ತೊಡೆಯ ಮೇಲೆಯೇ ಕುಳಿತಿರಬೇಕಿತ್ತು ಎಂಬ ಭಾವ ಜನ್ನನಲ್ಲಿದೆ. ದೂತಿಯ ಮಾತಿನ ವ್ಯಂಗ್ಯ, ಅದನ್ನು ನಿಜವೆಂದೇ ನಂಬಿದ ಅಮೃತಮತಿಯ ಕಾತರ–ಇದೆಲ್ಲ ಜನ್ನನಲ್ಲಿ ಮಾತ್ರ ಕಂಡುಬರುತ್ತದೆ.

ಮೂರನೆಯ ಅವತಾರ:– ವಾದಿರಾಜನ ಯಶೋಧರ,

ಬೆಳುದಿಂಗಳು ಕತ್ತಲೊಡನೆ ಬೆರೆಯುವ ಕನಸು ಕಂಡೆನೆನ್ನುತ್ತಾನೆ. ಆದರೆ ಜನ್ನನ ಯಶೋಧರ ಹೇಳುವ ಕನಸು ಬೇರೆ; ಅದರಲ್ಲಿ ಗ್ರಾಹ್ಯವಾದ ಚಿತ್ರವಿದೆ. ಹಿಟ್ಟಿನ ಕುಕ್ಕುಟವನ್ನು ಕೊಂದ ಯಶೋಧರ ಮೂಲದಲ್ಲಿ ಹೀಗೆ ವ್ಯಥೆಪಡುತ್ತಾನೆ: "ಅಯ್ಯೋ ! ಚೆಲುಗಂಗಳ ಅಮೃತಮತಿಯಿಂದ ನಾನು ಕೆಟ್ಟೆ; ತಾಯ ಅಪ್ಪಣೆಯಿಂದ ನಾನು ಕೆಟ್ಟೆ; ಅಯ್ಯೋ! ನರಕದಲ್ಲಿ ಚಿರವಾಸಿಯಾದೆ. ಅಜೇಯ ಭವಬಂಧಕ್ಕೆ ಗುರಿಯಾದೆ!" ಈ ಸಂದರ್ಭ ದಲ್ಲಿ "ಅಮೃತಮತಿಯೆಂಬ ಪಾತಕಿಯ ಮಾಯೆ ಬನವಾಯ್ತು...." ಎಂದು ಮೊದಲಾಗುವ ಸಮಗ್ರ ರೂಪಕವೊಂದು ಜನ್ನನಿಂದ ನಿರ್ಮಿತ ವಾಗಿದೆ.

ನಾಲ್ಕನೆಯ ಅವತಾರ:–ವಾದಿರಾಜನ ಪ್ರಕಾರ ಯಶೋಧರ ಚಂದ್ರಮತಿಯರ ಕಥೆಯನ್ನೆಲ್ಲ ಆಲಿಸಿದ ಚಂಡಮಾರಿ 'ವಧದುಃಖ ಭೀರು'ವಾಗಿ, ಶುದ್ಧದೃಷ್ಟಿಯನ್ನು ಪಡೆದು ವಿರಕ್ತಳಾಗುತ್ತಾಳೆ. ಹೀಗೆ ದೇವತೆಗೂ ಜೈನದೀಕ್ಷೆ ಕೊಟ್ಟುದಕ್ಕೆ ವಾದಿರಾಜನ ಮತೀಯ ಆವೇಶ ಕಾರಣವಿರಬೇಕು. ಜನ್ನ ಅಂತಹ ಪ್ರಯತ್ನಕ್ಕೆ ತೊಡಗದ ಉಚಿತಜ್ಞ.

ಜನ್ನ ಕಣ್ಣುಮುಚ್ಚಿಕೊಂಡು ವಾದಿರಾಜನಿಗೆ ಜೋತುಬೀಳದೆ, ಕಥೆಯನ್ನು ತನ್ನದನ್ನಾಗಿ ಮಾಡಿಕೊಂಡಿದ್ದಾನೆಂದು ತೋರಿಸಲು ಇಷ್ಟು ಸಾಕು. ಮೂಲದಲ್ಲಿ ನೀರಸವಾಗಿರುವ ಕಡೆಗಳಲ್ಲಿ ಅವನು ಸ್ವಾರಸ್ಯ ತುಂಬಿದ್ದಾನೆ; ಮೂಲದ ಓರೆಕೋರೆಗಳನ್ನು ತಿದ್ದಿಕೊಂಡು, ತನ್ನ ಕೃತಿ ಪರಿಪೂರ್ಣವಾಗುವಂತೆ ನೋಡಿಕೊಂಡಿದ್ದಾನೆ. ಮುಖ್ಯವಾಗಿ ಅಮೃತ ಮತಿಯ ಪಾತ್ರವನ್ನು ಅವನು ಹೊಸದೃಷ್ಟಿಯಿಂದ ಕಂಡು ಕಂಡರಿಸಿದ್ದಾನೆ; ಅದರ ಮೇಲೆ ಹೊಸಬೆಳಕು ಚೆಲ್ಲಿದ್ದಾನೆ. ತತ್ಪರಿಣಾಮವಾಗಿ, ವಾದಿರಾಜನ ಅಮೃತಮತಿಯಂತೆ ಜನ್ನನ ಅಮೃತಮತಿ ಸಂಪೂರ್ಣ ದೂಷ್ಯಳಾಗದೆ ಕಿಂಚಿತ್ತಾದ ಅನುಕಂಪೆಗೆ ಪಾತ್ರಳಾಗುತ್ತಾಳೆ. "ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ?" ಎಂಬುದು ಜನ್ನನ

ಸ್ವಂತ ಕಾಣ್ಕೆ. ಈ ಎಲ್ಲ ಕಾರಣಗಳಿಂದ, ಕನ್ನಡ ಯಶೋಧರಚರಿತೆ ಸಂಸ್ಕೃತ ಯಶೋಧರಚರಿತೆಗಿಂತ ಮೇಲಾದ ಕಾವ್ಯ ಮತ್ತು "ಜನ್ನನು ವಾದಿರಾಜನಿಗಿಂತ ಉತ್ತಮನಾದ ಕವಿ" ಎಂದು ನಿರ್ಣಯಿಸಿದರೆ ತಪ್ಪಾಗಲಿಕ್ಕಿಲ್ಲ. ಆದರೆ ಜನ್ನನನ್ನು ಕೊಂಡಾಡುವ ಭರದಲ್ಲಿ ನಾವು ಮೂಲವನ್ನು ಮರೆಯಬಾರದು; ಜನ್ನನ ಮೇಲಿರುವ ವಾದಿರಾಜನ ಋಣವನ್ನು ಕಡೆಗಣಿಸಲಾಗದು.

## ಪ್ರಣಯ ಸಮಸ್ಯೆ

'ಯಶೋಧರಚರಿತೆ'ಯಲ್ಲಿ ವಿಶೇಷವಾಗಿ ನಮ್ಮ ಮನಸ್ಸನ್ನು ಸೆಳೆಯತಕ್ಕದ್ದು ಅಮೃತಮತಿಯು ಧರ್ಮಿಸಿದ್ದ ಪ್ರಣಯದ ಪ್ರಸಂಗ. ರಾಣಿಯೊಬ್ಬಳು ಮನ್ಮಥನಂತಹ ಪತಿಯಿದ್ದರೂ ಅಷ್ಟಾವಕ್ರನೊಬ್ಬನಿಗೆ ತನುಮನಗಳನ್ನೊಪ್ಪಿಸಿದಳೆನ್ನುವ ಈ ಪ್ರಣಯ ಸಮಸ್ಯೆ ತುಸು ಚರ್ಚಾಸ್ಪದವಾಗಿದೆ. ಈ ಘಟನೆ ಸಂಪೂರ್ಣ ಅಸಹಜ, ಇದು ವೈರಾಗ್ಯ ಪ್ರಚೋದನೆಯ ಉದ್ದೇಶಕ್ಕಾಗಿ ಕವಿ ಬಳಸಿಕೊಂಡಿರುವ ಒಂದು ನೆಪ ಮಾತ್ರ ಎಂಬುದೊಂದು ಅಭಿಪ್ರಾಯ. ಈ ಪಕ್ಷದ ಪ್ರಕಾರ, ಪ್ರಣಯ ಸಮಸ್ಯೆ ಎಂಬುದೇ 'ಯಶೋಧರಚರಿತೆ'ಯಲ್ಲಿಲ್ಲ ಎಂದಾಗುತ್ತದೆ. ಆದರೆ ಅಷ್ಟು ಸುಲಭವಾಗಿ ಈ ಪ್ರಸಂಗವನ್ನು ತಳ್ಳಿಹಾಕುವಂತಿಲ್ಲ. ಕವಿಯ ಗಂತವ್ಯ ಯಾವುದೇ ಆಗಿರಲಿ, ದಾರಿಯಲ್ಲಿ ಬಂದ ಈ ಮಾನವೀಯ ಸಮಸ್ಯೆಯನ್ನು ಅವನು ಆಸಕ್ತಿಯಿಂದಲೇ ಚಿತ್ರಿಸಿದ್ದಾನೆ. ವೈರಾಗ್ಯ ಪ್ರಚೋದನೆಯ ದೃಷ್ಟಿಯಿಂದ ಕವಿ ಅದನ್ನು ಸ್ವಲ್ಪ ಉತ್ಪ್ರೇಕ್ಷಿಸಿರಬಹುದು; ಆದರೆ ಅದರ ಹಿಂದೆ ಸತ್ಯ ಸ್ವಲ್ಪಮಟ್ಟಿಗೆ ಉಂಟೇ ಉಂಟು. ಅದು ಸಂಪೂರ್ಣ ಅಸಂಭಾವ್ಯ ಎನ್ನುವಂತಿಲ್ಲ. ಅಂತೂ ಅಮೃತಮತಿಯ ಪ್ರಣಯಪ್ರಸಂಗ ಒಂದು ಮಾನವೀಯ ಸಮಸ್ಯೆಯಾಗಿ ನಮ್ಮನ್ನು ಆಲೋಚನೆಗೆ ಪ್ರೇರಿಸದೆ ಬಿಡುವುದಿಲ್ಲ.

ಅಮೃತಮತಿಗೆ ನಾಡಾಡಿಯಲ್ಲದ ಪತಿಯಿದ್ದಾನೆ; ಯಾವ ಭೋಗಕ್ಕೂ ಅರಕೆಯಿಲ್ಲ. ಒಲವು ಹೊನಲಾಗಿರುವ ಅವರ ದಾಂಪತ್ಯಜೀವನದಲ್ಲಿ ಯಾವ ಛಿದ್ರದ ಸೂಚನೆಯೂ ಇಲ್ಲ. ಒಬ್ಬ ಮಗನೂ ಅವರಿಗಿದ್ದಾನೆ. ಆದರೆ ಒಂದಿರುಳು ತೇಲಿ ಬಂದ ಮಾವಟಿಗನ ಮಧುರಗಾನಕ್ಕೆ ಅಮೃತಮತಿ ಮನಸ್ಸು ತೆತ್ತು ಅವನ ಕೂಟಕ್ಕೆಳಸುತ್ತಾಳೆ. ಅವಳ ಹೃದಯದಲ್ಲಿ ಹೋರಾಟವಾಗಲಿ ಸದಸದ್ವಿವೇಚನೆಯಾಗಲಿ ಒಂದಿನಿತೂ ನಡೆಯುವುದಿಲ್ಲ. ವಿದ್ಯುದ್ವೇಗದಲ್ಲಿ ವಿಷಯವ್ಯಾಮೋಹ ಅವಳನ್ನಾವರಿಸಿ ಕುರುಡು ಮಾಡುತ್ತದೆ. 'ಮೊದಲ ನೋಟದ ಪ್ರೇಮ' ಎಂಬ ಮಾತನ್ನು ಕೇಳಿದ್ದೇವೆ. ಆದರೆ ಇಲ್ಲಿ ನೋಟವೆ ಇಲ್ಲದೆ ಬೇಟ ಮೊದಲಾಗುತ್ತದೆ! ತಾನೊಲಿದವನ ರೂಪವೆಂತಹುದೆಂಬುದನ್ನು ತಿಳಿದ ಮೇಲೂ ಅವಳು ತನ್ನ ತಪ್ಪನ್ನರಿತುಕೊಳ್ಳುವುದಿಲ್ಲ; ಅರಿತುಕೊಂಡರೂ, ಒಮ್ಮೆ ತೆತ್ತ ಮನಸ್ಸನ್ನು ಹಿಂದಿರುಗಿಸಲು ಸಮರ್ಥಳಾಗುವುದಿಲ್ಲ. 'ಕಣೆಗಟ್ಟಿನಿಂದ ವನಹರಿಣಿಯವೋಲ್' ಅವಳ ಅವಸ್ಥೆಯಾಗುತ್ತದೆ. ಪತನದ ಹಾದಿಯಲ್ಲಿ ಮುನ್ನುಗ್ಗುವುದಷ್ಟೇ ಅವಳಿಗುಳಿದಿರುವುದು. "ಒಲವಿರೆ ರೂಪಿನ ಕೋಟಲೆಯೇವುದೊ ?" ಎಂಬ ಸಿದ್ಧಾಂತವನ್ನು ಅವಳು ಮುಂದೆ ಮಾಡಿ, ಜಾರನಲ್ಲಿ ನೆರೆಯುತ್ತಾಳೆ.

ಅಮೃತಮತಿಯ ಈ ಅನೈತಿಕ ನಡೆವಳಿಕೆಗೆ ಏನು ಸಮಾಧಾನ? ಅವಳ ಕಾಮವಿಕಾರಕ್ಕೆ ಏನು ಕಾರಣ ? ಎಂಬ ಪ್ರಶ್ನೆ ಏಳುತ್ತದೆ. ಅಷ್ಟವಂಕನ ಸಂಗೀತ ಅವಳ ಚಿತ್ತಚಾಂಚಲ್ಯಕ್ಕೆ ಪ್ರೇರಕವೆಂಬುದು ಕಾವ್ಯದಲ್ಲೇ ಉಕ್ತವಾಗುವ ಸಂಗತಿ; "ನೂತ್ನ ಗೀತ ಪಾತನ ವಿಕಲಸ್ವಾಂತೆ" ಎಂದೂ ಕವಿ ಸ್ಪಷ್ಟವಾಗಿ ಹೇಳಿದ್ದಾನೆ. ಸಂಗಿತಕ್ಕೆ ಕಾಮೋತ್ತೇಜಕ ಶಕ್ತಿಯುಂಟೆಂಬ ಮನಶ್ಶಾಸ್ತ್ರೀಯ ಸತ್ಯದ ಹಿನ್ನೆಲೆಯಲ್ಲಿ ಅಮೃತಮತಿಯ ವರ್ತನೆಯನ್ನು ವಿಶ್ಲೇಷಿಸುವ ಪ್ರಯತ್ನವೂ ನಡೆದಿದೆ. ಸಂಗೀತ ಅವಳಲ್ಲಿ ವಿಷಯಮರಿಯನ್ನು ಕೆರಳಿಸಿತೆಂದು ಒಪ್ಪೋಣ. ಆದರೆ "ಒಂದು ಗಳಿಗೆಯ

ಗಾನಕ್ಕೆ ಬಲಿಬೀಳುವಷ್ಟು ಹಗುರವಾಗಿತ್ತೇ ಅವಳ ನಿಡುಬಾಳಿನೊಲವು?" ಎಂದು ಕೇಳುವಂತಾಗುತ್ತದೆ. ವಾದಿರಾಜನಲ್ಲೇನೋ ಬೇರೊಂದು ಸೂಚನೆಯಿದೆ: "ಸದ್ಗುಣಸಂಪನ್ನನಾದ ಯಶೋಧರನಲ್ಲಿ ಮಧ್ಯಮ ಅಥವಾ ಜಘನ್ಯ ಗುಣಗಳಿರಲಿಲ್ಲ; ಆದ್ದರಿಂದ ಕಾಮುಕಿಯರಾದ ಸ್ತ್ರೀಯರು ಅವನಲ್ಲಿ ತೃಪ್ತಿಗೊಳ್ಳುತ್ತಿರಲಿಲ್ಲ"* ಎಂದಿರುವುದರಿಂದ, ಅಮೃತಮತಿ ಅತೃಪ್ತ ಹೆಣ್ಣಾಗಿದ್ದಳೇ ಎನಿಸುತ್ತದೆ. ಆದರೆ ಕವಿ ಅದನ್ನೊಂದು ಚಮತ್ಕಾರವಾಗಿ ಮಾತ್ರ ಉದ್ದೇಶಿಸಿದ್ದಾನೆ; ಹೆಚ್ಚಿನ ಬೆಲೆ ಅದಕ್ಕಿದ್ದಂತಿಲ್ಲ. ಆದ್ದರಿಂದ ಅಮೃತಮತಿ ಅಷ್ಟು ಹಗುರವಾಗಿ ಏಕೆ ವರ್ತಿಸಿದಳು ಎಂಬ ಪ್ರಶ್ನೆಗೆ ಮತ್ತೆ ಬರುತ್ತೇವೆ. ಇದಕ್ಕೆ ಸುಸಂಬದ್ಧವಾದ ಉತ್ತರವಿಲ್ಲವೆನ್ನುವುದೇ ಇಲ್ಲಿನ ಸ್ವಾರಸ್ಯ; ಪ್ರಸಂಗದ ದಾರುಣತೆ ತೀವ್ರತರವಾಗಿರತಕ್ಕದ್ದೇ ಅದರಿಂದ. ಈ ಬಗ್ಗೆ ಕವಿಯ ದೃಷ್ಟಿಯೇನು ? "ಚೆಂದ ಬಿದಿಗೆ ಕಣ್ಣೆಲ್ಲಕ್ಕುಂ," "ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ?" ಎನ್ನುವುದೇ ಕವಿಯ ನಿಲುವೆಂದು ತೋರುತ್ತದೆ. ಇದೂ ಕೂಡ ಪ್ರಶ್ನೆಗೆ ಸಮರ್ಪಕ ಉತ್ತರವಲ್ಲ. ಆದರೆ ನಮ್ಮ ಪ್ರಶ್ನೆಗಳೆಲ್ಲ ಮನಸಿಜನ ಮಾಯೆ ಮತ್ತು ವಿಧಿವಿಲಾಸವನ್ನು ಕುರಿತ ಗಹನ ಚಿಂತನೆಯಲ್ಲಿ ಕರಗಿಹೋಗುತ್ತವೆ. ಸಮಸ್ಯೆ ಹೀಗಿದೆ ಎಂದು ನಮ್ಮ ಮುಂದಿಡುವುದು ಕವಿಯ ಕೆಲಸವೇ ಹೊರತು ಅದನ್ನು ಬಿಡಿಸುವುದಾದರೂ ಹೇಗೆ ಶಕ್ಯ ?

ಅಮೃತಮತಿಯದು ಕ್ಷಣಿಕ ಮೋಹವಲ್ಲ; ಅಷ್ಟವಂಕನಲ್ಲಿ ಅವಳು ತಳೆದ ಒಲವು ಬಲು ಗಾಢವಾದದ್ದು. ನಮ್ಮ ಮೇಲೆ ಪರಿಣಾಮ

---

* ತಸ್ಯೋತ್ತಮಾಶೇಷಗುಣಸ್ಯ ಕಶ್ಚಿ–
ನ್ನ ಮಧ್ಯಮೋ ನಾಪಿ ಗುಣೋ ಜಘನ್ಯಃ
ತಸ್ಮಿನ್ನ ಭೇಜುಸ್ತತ ಏವ ತೃಪ್ತಿಂ
ತಾಭ್ಯಾಂ ಸಕಾಮಾ ಹಿ ನಿತಂಬವತ್ಯಃ.

ವೆಸಗತಕ್ಕದ್ದು ಆ ಗಾಢತೆ. ತಡವಾಯಿತೆಂದು ಅಷ್ಟವಂಕ ಬಾರೇಳುವಂತೆ ಒದೆದು ಬಡಿದಾಗ, ಅವಳು "ನಲ್ಲನೆ, ನನ್ನನ್ನು ಬೇಕಾದರೆ ಬಡಿ. ಆದರೆ ಮುಳಿಯದಿರು; ನೀನು ನನ್ನನ್ನು ಬಿಟ್ಟರೆ ಸಾಯುತ್ತೇನೆ,ಮಿಕ್ಕ ಗಂಡಸರೆಲ್ಲ ನನ್ನ ಸೋದರರು" ಎಂದಾಡುವ ಮಾತು ನಮ್ಮಲ್ಲಿ ಅನುಕಂಪ ಮೂಡಿಸುತ್ತದೆ. ತನ್ನ ಮಾತಿಗೆ ತಕ್ಕಂತೆ ಕೊನೆಯವರೆಗೂ ಆ ತೊನ್ನನ ಕೂಟದಲ್ಲೇ ಅವಳು ನಲಿಯುತ್ತಾಳೆ; ತನ್ನ ದೇಹ ಹುಳಿತು ಹೋದರೂ ಅವನನ್ನು ಬಿಡುವುದಿಲ್ಲ. ಅದೇನು ರಾಗಾಂಧತೆ! ಅವಳು ಪತಿಯನ್ನೂ ಅತ್ತೆಯನ್ನೂ ಕೊಂದುದು ಆಶ್ಚರ್ಯವಲ್ಲ. ಒಂದು ಪಾಪ ಮತ್ತೊಂದಕ್ಕೆ ನಾಂದಿಯಾಗಿ ಪಾಪದ ಸರಪಳಿ ಬೆಳೆಯುತ್ತಾ ಹೋಗುವುದು ಸ್ವಾಭಾವಿಕ. ತನ್ನ ಗುಟ್ಟು ಬಯಲಾಯಿತೆಂಬ ದಿಗಿಲಿನಿಂದ ಮತ್ತು ಗಂಡ ವ್ಯಂಗ್ಯೋಕ್ತಿಯನ್ನಾಡಿದನೆಂಬ ಕೋಪದಿಂದ ಅವಳು ದುಷ್ಕೃತ್ಯವನ್ನು ಮಾಡಿದಳು. ಅವಳು ಮಾಡಿದ್ದೆಲ್ಲ ಘೋರ ಪಾತಕ; ಅದರ ಫಲವನ್ನವಳು ಅನುಭವಿಸಬೇಕಾಗುತ್ತದೆ. ಧರ್ಮದ ಕಠೋರದಂಡ ಅವಳನ್ನು ಧೂಮ ಪ್ರಭೆಗೆ ತಳ್ಳುತ್ತದೆ; ಅದಕ್ಕಾಗಿ ಯಾರೂ ಮರುಗುವುದಿಲ್ಲ. ನೃತ್ಯ ಗೀತವನ್ನು ಆಲಿಸಿದ ವಿಷಗಳಿಗೆಯಲ್ಲೇ ಅವಳು ತನ್ನ ಚಿತ್ತಸ್ಖಲನೆಯನ್ನು ತಡೆಗಟ್ಟಬೇಕಿತ್ತು. ಆದರೆ ಮನಸಿಜನ ಮಾಯೆ ಅವಕಾಶ ಕೊಡಲಿಲ್ಲ. ಮುಂದಿನ ಅನರ್ಥ ಪರಂಪರೆಗೆ, ದುರಂತಕ್ಕೆ ಆಗ ಬೀಜಾರೋಪಣವಾಯಿತು. ಹಾಗಾಗಬಾರದಿತ್ತು ಎಂದುಕೊಳ್ಳುತ್ತೇವೆ. ಆದರೆ "ಆರಜ್ಜಿವರಯ್ಯ ವಿಧಿವಿಳಸನಮಂ ?"

ಬದುಕಿನ ವೈಚಿತ್ರ್ಯ ಎಂತಹುದು, ಮನಸಿಜನ ಮಾಯೆ ವಿಧಿವಿಳಸನಗಳು ಜೊತೆಯಾದರೆ ಬಾಳಿನಲ್ಲಿ ಏನನ್ನು ತಾನೇ ಮಾಡಿಸವು, ಆಗ ಯಾವುದು ತಾನೇ ಅಸಂಭವವಾದೀತು – ಎಂಬುದರ ಪರಿಭಾವನೆಯಲ್ಲಿ ನಮ್ಮ ಮನಸ್ಸು ನಿಲ್ಲುತ್ತದೆ. ಕವಿಯ ಇಂಗಿತವೂ ಅಷ್ಟೇ ಇರಬೇಕು.

## ಕವಿಯ ಉದ್ದೇಶ

'ಯಶೋಧರಚರಿತೆ' ಧಾರ್ಮಿಕ ಕಾವ್ಯ; "ಅಭಯರುಚಿ ಕುಮಾರಂ ಮಾರಿದತ್ತಂಗೆ ಹಿಂಸಾರಭಸಮತಿಗೆ ಸಯ್ಪು[1]ಪೇೞ್ದು ಧರ್ಮಕ್ಕೆ ತಂದ ಶುಭಕಥನ." ಅಮೃತಮತಿಯ ಪ್ರಣಯ ವೃತ್ತಾಂತ ಅದರ ತಿರುಳೆನಂತೆ ಭಾಸವಾದರೂ, ಕಾವ್ಯೋದ್ದೇಶದ ದೃಷ್ಟಿಯಿಂದ ಅದು ಗೌಣ. ಆದರೆ ಆ ಪ್ರಣಯ ನಿರೂಪಣೆಯೂ ಒಂದು ರೀತಿಯಲ್ಲಿ ಕವಿಯ ಉದ್ದೇಶಕ್ಕೆ ಪೂರಕವಾಗಿದೆಯೆಂದೇ ವಾದಿಸಬಹುದು. "ಈ ಸಂಸಾರ ನಿಸ್ಸಾರ; ವೈರಾಗ್ಯವೇ ಜೀವನದ ಪರಮಮಾರ್ಗ ಎಂಬುದನ್ನು ಹೆಜ್ಜೆಹೆಜ್ಜೆಗೂ ಒತ್ತಿ ಹೇಳುವುದೇ ಕವಿಯ ಉದ್ದೇಶ...ಜೀವನದಲ್ಲಿ ಯಾವುದು ಭೋಗದ ತವರೋ, ಯಾವುದನ್ನು ಸುಖವೆಂದೂ ಸ್ವಾರಸ್ಯವೆಂದೂ ನಾವು ಕೊಂಡಾಡುತ್ತೇವೆಯೋ ಅದೇ ಇಷ್ಟು ಅಸಹ್ಯ ಎಂಬುದನ್ನು ತೋರಿಸಿ ಯಶೋಧರನ ವೈರಾಗ್ಯಕ್ಕೆ ಅಣಿಮಾಡಿಕೊಡುವುದು, ಸಹೃದಯ ಹೃದಯದಲ್ಲಿ ವೈರಾಗ್ಯಭಾವವನ್ನು ಹುಟ್ಟಿಸುವುದು ಕವಿಯ ಏಕಮಾತ್ರ ಆಶಯ." ವಿಧಿವಿಲಾಸವನ್ನು ಕುರಿತ ಗಂಭೀರ ಚಿಂತನೆಯಲ್ಲಿ ನಮ್ಮನ್ನು ತೊಡಗಿಸಿ ಪಾರಮಾರ್ಥಿಕದ ಕಡೆಗೆ ಸೆಳೆಯುವ ಉದ್ದೇಶವೂ ಆ ಪ್ರಸಂಗಕ್ಕಿದ್ದೀತು.

ಜನ್ನನ ನೇರವಾದ ಉದ್ದೇಶ, ಮುಖ್ಯವಾದ ಗುರಿ, "ಜೀವದಯೆ ಜೈನಧರ್ಮಂ" ಎಂಬುದರ ಪ್ರತಿಪಾದನೆ ಎನ್ನುವುದು ಸ್ಪಷ್ಟ. ಅಹಿಂಸೆಯ ಮಹಿಮೆ, ಹಿಂಸೆಯ ದುರಂತಗಳನ್ನು ಕವಿ ತನ್ನ ಕಾವ್ಯದಲ್ಲಿ ಚಿತ್ರಿಸಬಯಸಿದ್ದಾನೆ. ಹಿಂಸೆ ಅಹಿಂಸೆಗಳ ಹೋರಾಟದಲ್ಲಿ ಹಿಂಸೆ ಸೋಲಲೇಬೇಕು. ಅಹಿಂಸೆಗೇ ಅಂತಿಮ ಜಯ ಎಂಬುದು ಮಾರಿದತ್ತನ ವೃತ್ತಾಂತದಲ್ಲಿ ವ್ಯಕ್ತವಾಗಿದೆ; ಹಿಂಸೆಯ ದುಷ್ಪರಿಣಾಮ ಯಶೋಧರ

---

[1] ಸಯ್ಪು=ಒಳ್ಳೆ ಮಾತು.

ಚಂದ್ರಮತಿಯರ ಕಥೆಯಲ್ಲಿ ನಿದರ್ಶನಗೊಂಡಿದೆ. ತಾಯಿ ಮಕ್ಕಳು ಒಂದು ಹಿಟ್ಟಿನ ಕೋಳಿಯನ್ನು ಕೊಂದಮಾತ್ರಕ್ಕೆ ಆರಾರು ಜನ್ಮಗಳನ್ನೆತ್ತಿ ವಿವಿಧ ತಿರ್ಯಗ್ಗತಿಗಳಲ್ಲಿ ತೊಳಲಬೇಕಾಯಿತು. ಅವರು ಆಚರಿಸಿದ್ದು ಮಾನಸಿಕವಾದ ಸಂಕಲ್ಪ ಹಿಂಸೆಯಷ್ಟೇ, ನಿಜವಾದ ಹಿಂಸೆಯಲ್ಲ. ಸಂಕಲ್ಪ ಹಿಂಸೆಯಿಂದಲೇ ಅವರು ಅಷ್ಟೊಂದು ಪಾಡು ಪಡಬೇಕಾಯಿತಲ್ಲ, ಇನ್ನು ನಿಜವಾದ ಕಾಯಿಕ ಹಿಂಸೆಯನ್ನೆಸಗುವ ಜೀವ ಎಂತಹ ಘೋರ ದುರ್ಗತಿಯನ್ನು ಅನುಭವಿಸಬೇಕಾದೀತು ಎಂಬುದನ್ನು ಮನಗಾಣಿಸುವುದು ಕವಿಯ ಆಶಯ.

"ಮೇಗಂ ಬಗೆವೊಡೆ ವಧೆ ಹಿತಮಾಗದು ಮರ್ತ್ಯಂಗೆ" ಎಂಬುದು ತನಗೆ ತಿಳಿದಿದ್ದರೂ, ದೌರ್ಬಲ್ಯದ ಗಳಿಗೆಯೊಂದರಲ್ಲಿ ಯಶೋಧರ ಪಿಷ್ಟಕುಕ್ಕುಟವನ್ನು ವಧಿಸಿದ. ತಿಳಿದೂ ಎಸಗಿದ ತಪ್ಪಿಗಾಗಿ ಅವನು ಏಳು ಜನ್ಮಗಳ ಶಿಕ್ಷೆಯನ್ನು ಭೋಗಿಸಬೇಕಾಯಿತು. ಮಾರಿದತ್ತನ ವಿಷಯ ಹಾಗಲ್ಲ. ಅವನು ಪ್ರಾಯಶಃ ಧರ್ಮರಹಸ್ಯವನ್ನರಿಯದೆ ಮೂಢ ನಂಬಿಕೆಯಿಂದ ಹಿಂಸಾರತನಾಗಿದ್ದವನು. ಅಹಿಂಸೆಯೆ ರೂಪುವೆತ್ತಂತೆ ಬಂದ ಅಭಯರುಚಿ ಅಭಯಮತಿಯರ ಅಚಲಧೈರ್ಯವನ್ನು ಕಂಡೊಡನೆಯೇ ಅವನಲ್ಲಿ ವಿವೇಕಸಂಚಾರವಾಯಿತು; ಅವರ ಕತೆಯನ್ನು ತಿಳಿದಮೇಲೆ ಅವನು ಸಂಪೂರ್ಣ ಪರಿವರ್ತಿತನಾಗಿ ತಪಸ್ಸಿನಿಂದ 'ಕಲಿಯುಂ ಮೂದಲಿಸಿದಂತೆ' ದೇವನೇ ಆದ. ಹಿಂಸೆಯ ಮೂರ್ತಿಯಾಗಿದ್ದ ದುರ್ಗೆ ಸಾತ್ವಿಕೆಯಾಗಿ ಶಿವೆಯಾದಳು. ಇಲ್ಲಿ ನಾವು ಅಹಿಂಸೆಯಿಂದ ಹಿಂಸೆಯ ಪರಾಜಯವನ್ನು ಕಾಣುತ್ತೇವೆ; ಹಿಂಸೆ ಅಹಿಂಸೆಯಾಗಿ ಪರಿಣಮಿಸಿದ ಕಥೆಯಿದು.

ಹಿಂಸೆಯಿಂದ ಆತ್ಮ ಪತನ ಹೊಂದುತ್ತದೆ, ನಿಜ. ಅಷ್ಟೇ ಆಗಿದ್ದರೆ ಮಾನವ ನಿರಾಶಾವಾದಿಯಾಗಬೇಕಾಗಿತ್ತು. ಅವನ ಸಾಧನೆಗಳೆಲ್ಲ ಅರ್ಥಹೀನವಾಗುತ್ತಿದ್ದುವು. ಆದರೆ ಪಾಪಹತವಾದ ಆತ್ಮ ಕರ್ಮಕ್ಷಯ

ಪಾದಸಂತರ ಮತ್ತೆ ಉದ್ಧಾರಗೊಳ್ಳುವುದು ನಿಶ್ಚಯ. ಇದು ಭಾರತೀಯ ದೃಷ್ಟಿ. ಇದರ ಪ್ರಕಾರ, 'ಯಶೋಧರಚರಿತೆ'ಯಲ್ಲಿ ಯಶೋಧರ ಬಿದ್ದ ಕಥೆ ಮಾತ್ರವಲ್ಲದೆ ಎದ್ದ ಕಥೆಯೂ ನಿರೂಪಿತವಾಗಿದೆ. ಕೇಡಿನಲ್ಲಿ ಕೆಡದ ಯಶೋಧರನ ಆತ್ಮ ಕುರಂಗ ಏಳು ಜನ್ಮಗಳನಂತರ ಪರಿಪಾಕಗೊಂಡು ಕರ್ಮದಿಂದ ಬಿಡುಗಡೆ ಪಡೆಯಿತು; ಅಕಂಪನಮುನಿಯ ವಚನದಿಂದ ಅದರ ಉದ್ಧಾರದ ಅಭೀಪ್ಸೆ ಎಚ್ಚೆತ್ತು, ಸುದತ್ತಾಚಾರ್ಯರ ಕರುಣದಿಂದ ಸಿದ್ಧಿಸಿತು. ಅಂತೆಯೆ, ಹಿಂಸಾವಿಮುಖಿನಾದ ಮಾರಿದತ್ತ ತಪವನ್ನೆಸಗಿ ಮರುಜನ್ಮದಲ್ಲೇ ಸದ್ಗತಿ ಪಡೆದ. ಹೀಗಾಗಿ 'ಯಶೋಧರಚರಿತೆ' ಅಹಿಂಸೆಯ ದಿವ್ಯ ಸಂದೇಶವನ್ನು ಮೊಳಗಿಸುವುದು ಮಾತ್ರವಲ್ಲದೆ, "ಪಾಪಿ ಗುದ್ಧಾರಮಿಹುದೌ ಸೃಷ್ಟಿಯ ಮಹದ್‌ವ್ಯಾಹರಚನೆಯೊಳ್" ಎಂಬ ಭರವಸೆಯನ್ನು ನೀಡುತ್ತದೆ.

ಅಹಿಂಸೆ ಜೈನಧರ್ಮದ ಮೂಲತತ್ತ್ವ. 'ಜೀವದಯೆ ಜೈನಧರ್ಮಂ.' ಆದರೆ ಅದು ಎಲ್ಲ ಧರ್ಮಗಳ ಅಡಿಗಲ್ಲು; ಅದರ ಹೊರತು ಬೇರೆ ಮಾರ್ಗವಿಲ್ಲ. ಆದ್ದರಿಂದ ಕವಿ ಸಾರಿರುವ ಅಹಿಂಸೆಯ ಸಂದೇಶ ಜೈನಧರ್ಮದ ಸಂದೇಶ ಮಾತ್ರವಾಗದೆ, ಇಡೀ ಮಾನವ ಧರ್ಮದ ಸಂದೇಶವಾಗಿ ಕೇಳಿಬರುತ್ತದೆ. ಕಾಲ ದೇಶ ಮತ ಪಂಥಗಳ ಎಲ್ಲೆಕಟ್ಟನ್ನು ಮೀರಿದ ವಿಶ್ವವ್ಯಾಪಕ, ಸರ್ವಗ್ರಾಹ್ಯ ತತ್ತ್ವವೊಂದನ್ನು ಕವಿ ತನ್ನ ಕೃತಿಯಲ್ಲಿ ಅಭಿವ್ಯಕ್ತಗೊಳಿಸಿದ್ದಾನೆ. ' ಧರ್ಮದಿಂದ ಆಗದುದೇಂ ?' ಎಂಬ ಸಾಭಿಪ್ರಾಯವಾದ ಪ್ರಶ್ನೆಯಲ್ಲಿ ಅವನ ಕಾವ್ಯೋದ್ದೇಶವೆಲ್ಲ ಅಂತರ್ಗತವಾಗಿದೆ. ಈ ಕಾರಣದಿಂದ 'ಯಶೋಧರಚರಿತೆ' ಬರಿಯ ಮತೀಯ ಗ್ರಂಥವಾಗದೆ, ಉದಾತ್ತ ದರ್ಶನ ಸಮನ್ವಿತವಾದ ಕಾವ್ಯವಾಗಿ ಪರಿಣಮಿಸಿದೆ.

## ಕವಿತಾ ಕಲೆ

ಸೂಕ್ಷ್ಮವಾದ ಕಲಾವಿಲಾಸ 'ಯಶೋಧರಚರಿತೆ'ಯ ಉದ್ದಕ್ಕೂ ಹರಡಿಕೊಂಡಿದೆ. ಕಥೆಯ ಪ್ರಾರಂಭವೇ ತುಂಬ ನಾಟಕೀಯವಾಗಿ ಪ್ರಭಾವಶಾಲಿಯಾಗಿದೆ. ಉಳಿದ ಕಡೆ ಮನೋಹರವಾಗಿರುವ ವಸಂತ ಇಲ್ಲಿ ಭಯಾನಕವಾಗಿದೆ, ಕವಿಯ ಕಲ್ಪನಾಶಕ್ತಿಯಿಂದ :

ಸಿಸಿರಮ[1]ನೆ ಪಿಡಿದು ಪರಕೆಗೆ
ವಸಂತನ್ ಅಲರ್ವೋದ ಮಾವಿನ ಅಡಿಮಂಚಿಕೆ[2]ಯೊಳ್
ಕುಸುರಿದಱಿದ ಅಡಗಿ[3]ಸಂತೆವೊ
ಲೆಸೆಮುವು ತದ್ವನದೊಳ್ ಉದಿರ್ದ ಮುತ್ತದ[4]ಮುಗುಳ್ಗಳ್

ಹಿಂಸೆಯ ಆ ರೌದ್ರಾಟೋಪಕ್ಕೆ ಈ ವರ್ಣನೆ ಹೊಂದಿಕೊಂಡು, ಯೋಗ್ಯವಾದ ಹಿನ್ನೆಲೆಯನ್ನೊದಗಿಸುತ್ತದೆ. ವಸ್ತುನಿಷ್ಠವಾದ ಇಂಥ ವರ್ಣನೆಗಳು ಸಾಹಿತ್ಯದಲ್ಲಿ ಬಹಳವಿಲ್ಲ. ಅಭಯರುಚಿ ಅಭಯಮತಿಗಳ ಮಂದರೋಪಮ ಸ್ಥೈರ್ಯವನ್ನು ಕಂಡು ಮಾರಿದತ್ತ ಬೆಚ್ಚಿಬೆರಗಾಗುತ್ತಾನೆ. ಅಹಿಂಸೆಯ ಪ್ರಖರ ತೇಜಸ್ಸಿಗೆ ಹಿಂಸೆಯ ಕಣ್ಣು ಕೋರೈಸುತ್ತದೆ, ಕೈ ತತ್ತರಿಸುತ್ತದೆ. "ನೃಪವರ, ನಿರ್ಮಲ ಧರ್ಮದಿಂದ ಪಾಲಿಸು ಧರೆಯಂ" ಎಂಬ ಅಭಯರುಚಿಯ ಹರಕೆ ಫಲಿಸದೆ ಗತಿಯಿಲ್ಲ. ಮುಂದಿನ ಕಥೆಗೆ ಕವಿ ಎಂತಹ ಭವ್ಯಪೀಠಿಕೆಯನ್ನೊದಗಿಸಿದ್ದಾನೆ !

ಅಮೃತಮತಿಯ ಪಾತ್ರವನ್ನು ಕವಿ ಶಕ್ತರೀತಿಯಲ್ಲಿ ಚಿತ್ರಿಸಿದ್ದಾನೆ. ಮೂಲದಲ್ಲಿ ಸರಳವಾಗಿದ್ದ ಈ ಪಾತ್ರ ಇಲ್ಲಿ ತುಸು ಸಂಕೀರ್ಣವಾಗುತ್ತದೆ. ಅವಳ ಅಧಃಪಾತವನ್ನು ಕವಿ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿದ್ದಾನೆ. ಪಟ್ಟದಾನೆಯ ಬದಗನ ನುಣ್ದನಿಯನ್ನು ಕೇಳಿದೊಡನೆಯೇ ಅವಳು

---

[1] ಸಿಸಿರ=ಶಿಶಿರಋತು. [2] ಅಡಿಮಂಚಿಕೆ=ಅಡಿಯಲ್ಲಿರುವ ಒಂದು ಬಗೆಯ ಅಟ್ಟಣೆ. [3] ಅಡಗು=ಮಾಂಸ. [4] ಮುತ್ತ= ಮುತ್ತುಗ.

"ಮುಟ್ಟಿದ ಮನಮಂ ತೊಟ್ಟನೆ ಪಸಾಯದಾನಂಗೊಟ್ಟಳ್." ಇಲ್ಲಿ ಕವಿ ಸ್ವಲ್ಪ ವಿವರವಾಗಿ ಅಮೃತಮತಿಯ ಮನೋವ್ಯಾಪಾರವನ್ನು ಬಿಡಿಸಿ ತೋರಿಸಬಹುದಿತ್ತು ಎನಿಸಬಹುದು. ಆದರೆ ಕವಿ ತೋರಿರುವ ಮಿಂಚಿನ ವೇಗ ಸಮರ್ಥನೀಯ–ಘಟನೆ ನಡೆವದ್ದೇ ಹಾಗೆ. ಅವಳ ಮನಸ್ಸಿನಲ್ಲಿ ಕಿಂಚಿತ್ತಾದರೂ ತುಮುಲ ನಡೆದಿದ್ದ ಪಕ್ಷದಲ್ಲಿ ಅವಳು ಜಾರಿ ಬೀಳುತ್ತಿರಲಿಲ್ಲ. 'ಮನಸಿಜನ ಮಾಯೆ' ಅನಿರೀಕ್ಷಿತವಾಗಿ ಬಂದೆರಗಿ ತನ್ನ ಕೆಲಸವನ್ನು ಪೂರೈಸಿತು. ಅಷ್ಟಾವಂಕನನ್ನು ನೋಡಿ ಬಂದ ದೂತಿ "ಇಂತಪ್ಪ ಕಾಮದೇವಂಗೆ ಎಂತೆಂತು ಆಯ್ದು ಅಜಸಿ ಕೂರ್ತೆ ಎಂದಾನಱಿಯೆಂ!" ಎಂದಾಗ ಅವಳು ಅಣಕವನ್ನು ಅರ್ಥಮಾಡಿಕೊಳ್ಳದೆ, "ಕಾದಲನ್ ಅಂತಿರೆ ಚೆಲ್ವನೆ? ದೂದವಿ, ನೀನೆನ್ನ ಕೊಂದೆ!" ಎನ್ನುತ್ತಾಳೆ. ಅವಳ ಆತುರ ಕಾತರಗಳು ಹೇಗೆ ಧ್ವನಿತವಾಗುತ್ತವೆ ! ಮುಂದೆ ಕವಿ ಕೊಡುವ ಚಿತ್ರ ಪರಿಣಾಮಕಾರಿಯಾಗಿದೆ: "ಗರಗರಿಕೆ[1] ಕೊರಲೊಳ್ ಈಕ್ಷಣದೊಳ್[2] ವಾರ್‌ಬಿಂದು[3] ಮಿದುಕು ಎರ್ದೆಯೊಳ್ ಒದವೆ ಪುಳಿಂದನ ಕಣೆ[4] ಗಟ್ಟಿ ಸಿಂದ ವನಹರಿಣಿಯವೊಲ್!" 'ಪ್ರೇಮದ ಉದ್ರಿಕ್ತಸ್ಥಿತಿಯಿಂದ ಅಮೃತಮತಿಗೆ ಒದಗಿರುವ ಅಸಹಾಯ ಸ್ಥಿತಿಯನ್ನೂ ಅದರಲ್ಲಿ ಅವಳು ಕೈಕೊಂಡ ಧೃತಿಯನ್ನೂ ಇಲ್ಲಿಯ ಉಪಮೆ ಎಷ್ಟು ಚೆನ್ನಾಗಿ ವ್ಯಕ್ತಪಡಿಸುತ್ತದೆ !'

ಯಶೋಧರನ ಘನತೆ, ಅದಕ್ಕೇ ಹೊಂದಿಕೊಂಡಂತೆ ಅವನ ದೌರ್ಬಲ್ಯ–ಇವನ್ನು ಕವಿ ಚೆನ್ನಾಗಿ ಕಾಣಿಸಿದ್ದಾನೆ. ಉಳಿದ ಗಂಡಸರೆಲ್ಲ ನನ್ನ ಸೋದರರೆಂದು ಅಮೃತಮತಿ ತನ್ನ ನಲ್ಲನಿಗೆ ನಂಬುಗೆ ತಿಳಿಸುವುದನ್ನು ಕಂಡಾಗ ಕನಿಕರ ಹುಟ್ಟಬಹುದೇನೋ; ಆದರೆ ಆ ಮಾತನ್ನು ಕೇಳಿದಾಗ. ಗಂಡನಾದವನಿಗೆ ಹೇಗಾಗಿರಬೇಕು ! "ಆಗಳ್ ಬಾಳ್ ನಿಮಿರ್ದುದು ತೋಳ್ ತೂಗಿದುದು.." ಅವನಲ್ಲಿ ಎಷ್ಟು ಬೇಗ ರೋಷ ತಾನೇ ತಾನಾಗಿ

[1] ಗರಗರಿಕೆ = ಗದ್ಗದ. [2] ಈಕ್ಷಣ = ನೋಟ. [3] ವಾರ್‌ಬಿಂದು = ನೀರಹನಿ. [4] ಕಣೆ = ಬಾಣ.

ಸ್ಫುರಿಸಿತೆಂಬುದನ್ನು ಈ ಕಿರುನುಡಿಗಳು ಧ್ವನಿಪೂರ್ಣವಾಗಿ ಹೇಳುತ್ತವೆ. ಆದರೆ ಯಶೋಧರ ಅವರನ್ನು ಕೊಲ್ಲುವುದಿಲ್ಲ; ಆ ಕ್ಷಣವೇ 'ಮಾಣ್ ಎಂಬ ತೆಜಿದೆ ಪೇಸಿದನರಸಂ'. ಮುಂದೆ ಅಮೃತಮತಿ ತನ್ನ ಮನೆಯಲ್ಲಿ ಊಟಕ್ಕೆ ಆಮಂತ್ರಿಸಿದಾಗ, 'ಮನಮಲ್ಲದ ಮನದೊಳೊಡಂಬಟ್ಟು' ಹೋಗುತ್ತಾನೆ. ಯಾವ ನಿರ್ಧಾರಕ್ಕೂ ಬೇಗ ಬರಲಾರದೆ ಹೊಯ್ದಾಡುವ ಅವನ ಮನಸ್ಸಿನ ಚಿತ್ರ ಸಹಜವಾಗಿದೆ.

ಇದು ಧಾರ್ಮಿಕ ಕಥೆಯಾದರೂ ಇಲ್ಲಿ ಧರ್ಮದ ಶುಷ್ಕ ವ್ಯಾಖ್ಯಾನವಿಲ್ಲ. ಉತ್ತರಾರ್ಧದಲ್ಲಿ ಬರುವ ಭವಾವಳಿಯ ವಿವರಗಳು ಅಷ್ಟಾಗಿ ಬೇಸರಗೊಳಿಸುವುದಿಲ್ಲ. ಅಲ್ಲಿನ ಪಶುಪಕ್ಷಿಗಳ ವೃತ್ತಾಂತ ತನ್ನಷ್ಟಕ್ಕೇ ಸ್ವಾರಸ್ಯಪೂರ್ಣವಾಗಿರುವುದು ಮಾತ್ರವಲ್ಲದೆ ಮೃದು ವಿಡಂಬನದ ಸಾಧನವಾಗಿಯೂ ಮನರಂಜಿಸುತ್ತದೆ. ಜೈನಧರ್ಮದ ತಿರುಳು ಬಹು ಸಂಕ್ಷಿಪ್ತವಾಗಿ ತಿಳಿಯಾಗಿ, "ತನುವಿಂ ಜೀವಂ ಬೇಜೆಂದು ಮಗನೆ ಭಾವಿಸಿ ನೋಡಾ" ಎಂಬಂತಹ ಮಾತುಗಳಲ್ಲಿ ನಿರೂಪಿತವಾಗಿದೆ. ಕಥೆ ಕಾವ್ಯಗುಣಗಳಿಂದ ಜೀವಂತವಾಗಿರುವಂತೆ ಕವಿ ಎಲ್ಲೆಡೆ ಎಚ್ಚರಿಕೆ ವಹಿಸಿದ್ದಾನೆ. ಆದ್ದರಿಂದ ಧರ್ಮ ಮತ್ತು ಕಾವ್ಯಧರ್ಮಗಳ ಮಧುರ ಸಮನ್ವಯ ಈ ಕೃತಿಯಲ್ಲಿ ಸಿದ್ಧಿಸಿದೆಯೆಂದು ಧಾರಾಳವಾಗಿ ಹೇಳಬಹುದು. ಕಾಂತಾ ಸಮ್ಮಿತಕ್ಕೆ ಇದು ಉತ್ತಮ ನಿದರ್ಶನ.

ಹಿತಮಿತಗಳ ಆದರ್ಶವನ್ನು ಕವಿ ಈ ಕಾವ್ಯದಲ್ಲಿ ಸಾಧಿಸಿದ್ದಾನೆ. ಕಥೆಯ ಓಟದಲ್ಲೇ ಅವನಿಗೆ ನೆಟ್ಟದೃಷ್ಟಿ; ಕಥೆಗೆ ಎಷ್ಟು ಬೇಕೋ ಅಷ್ಟು ಮಾತ್ರ ವರ್ಣನೆ ಬರುತ್ತದೆ. ಶೈಲಿಯಲ್ಲಿ ಸಂಸ್ಕೃತದ ಆರ್ಭಟವಿಲ್ಲ. ಆದರೆ 'ಚಿತ್ರಮಪಾತ್ರೇ ರಮತೇ ನಾರೀ,' 'ಕಿಂ ಮಿತ್ರಂ ಯನ್ನಿವರ್ತಯತಿ ಪಾಪಾತ್,' 'ದುರ್ಬಲಸ್ಯ ಬಲೋ ರಾಜಾ'–ಮುಂತಾದ ಸಂಸ್ಕೃತೋಕ್ತಿಗಳನ್ನು ಕವಿ ಚೆನ್ನಾಗಿ ಅಳವಡಿಸಿಕೊಂಡಿದ್ದಾನೆ. ಜಟಿಲವಾದ ಅಲಂಕಾರಗಳು ಇಲ್ಲಿಲ್ಲ; ಸಮುಚಿತವಾದ ಉಪಮೆರೂಪಕಗಳಿಗೇ

ಪ್ರಾಧಾನ್ಯ. "ಆಕೆ ದೀವಂ[1] ಆಗೆ ಪುಳಿಂದಂ ಸುಮನೋಬಾಣಂ[2] ತದ್ ಘೂರಮಣಿಣನನ್ ಒಲಿದಂತೆ ಗೋರಿಗೊಳಿಸುತ್ತಿರ್ಕುಂ[3]" ಎಂಬ ರೂಪಕ ಸುಂದರವಾಗಿದೆ; ಮುಂದಿನ ಕಥೆಯ ದೃಷ್ಟಿಯಿಂದ ಅರ್ಥವತ್ತಾಗಿಯೂ ಇದೆ. ಹಿಂದೆಯೇ ಅಲ್ಲಲ್ಲಿ ಉದಾಹೃತವಾಗಿರುವ ಉಪಮೆಗಳಲ್ಲದೆ, ಪಾಪದ ಬೆಳಸಿಂಗೆ ಬೆರ್ಚು[4] ಕಟ್ಟಿದ ತೆಱದಿಂ, ಕರ್ಬಿನಬಿಲ್ಗಂ ನನೆಯ ನಾರಿಗಂ ಪುಟ್ಟಿದವೋಲ್, ಅಱುನೀರ[5]ಮೀನ್‌ಬೋಲ್, ಪುಳಿಮುಟ್ಟಿದ ದುಗ್ಧದಂತೆ, ಬೆಕ್ಕು ಕೊಕ್ಕನಂ[6] ಪಿಡಿವಂತಿರೆ-ಮುಂತಾದುವನ್ನೂ ಗಮನಿಸಬಹುದು. ಗಾದೆಗಳ, ದೇಸಿನುಡಿ ಪಡೆನುಡಿಗಳ ಪ್ರಯೋಗ ಜನ್ನನ ಇನ್ನೊಂದು ವಿಶಿಷ್ಟತೆ. ಆಡಿದ ಹೊಲನ್ ಉಂಡ ಮರ್ದು ಕಂಡ ವಿಚಾರಂ, ಒಂದಡಸಿದೊಡೆ ಪಿಟಡಸಿತು, ಕೋಟಲೆಗೆ ಕೋಡು ಮೂಡಿದ ತೆಱದಿಂ, ಶಾಂತಿ ಮಾಡೆ ಬೇತಾಳಂ ಮೂಡಿದಂತೆ, ಸಿರಿಯನೊಟ್ಟಿ ಸುಡುಹೋಗೆಂದಂ, ಎಲೆ ದೇವರೆ ಪುತ್ತುಂ ಬತ್ತಲೆಯುಂ ಬೞಿದಿಲ್ಲದು ಎಂಬರ್–ಇತ್ಯಾದಿಗಳ ಸವಿ ಮರೆಯಲಾಗದು. (ಇಂಥವೆಷ್ಟೋ ಹಿಂದೆಯೇ ಉದ್ಧೃತಿಗೊಂಡಿವೆ.) ಇಂತಹ ಪರಿಮಿತ ವ್ಯಾಪ್ತಿಯಲ್ಲಿ ಇಷ್ಟರಮಟ್ಟಿಗೆ ದೇಸಿಯನ್ನು ಸೂರೆಮಾಡಿದ ಕವಿಗಳು ನಮ್ಮಲ್ಲಿ ಅತಿ ವಿರಳ. ಕನ್ನಡದ ಈ ರುಚಿ ವಾಸನೆಗಳು 'ಯಶೋಧರ ಚರಿತೆ'ಯ ಮೇಲ್ಮೆಗೆ ಪೋಷಕವಾಗಿವೆ.

'ಯಶೋಧರ ಚರಿತೆ'ಯ ರೂಪ ಕೂಡ ವಿಶಿಷ್ಟವಾದುದು. ಅವತಾರಾಂತ್ಯದಲ್ಲಿ ಬರುವ ಕೆಲವು ವೃತ್ತಗಳನ್ನು ಬಿಟ್ಟರೆ ಉಳಿದ ಕಾವ್ಯವೆಲ್ಲ ಬರಿಯ ಕಂದಗಳಿಂದ ರಚಿತವಾಗಿದೆ. ವಾದಿರಾಜನ

---

[1] ದೀವ = ಬೇಟೆಯನ್ನು ಸೆಳೆಯಲೋಸುಗ ಪಳಗಿಸಿದ ಪ್ರಾಣಿ. [2] ಸುಮನೋಬಾಣ = ಮನ್ಮಥ. [3] ಗೋರಿಗೊಳಿಸು = ವಶಪಡಿಸಿಕೊ. [4] ಬೆರ್ಚು=ಬೆದರು ಬೊಂಬೆ. [5] ಅಱುನೀರು=ಬತ್ತಿದ ನೀರು. [6] ಕೊಕ್ಕ=ಕೋಳಿ.

ಕೃತಿಯಲ್ಲೂ ಲಘು ಛಂದೋರೂಪಗಳೇ ಪ್ರಯೋಗವಾಗಿವೆ. ಅದಕ್ಕನುಗುಣವಾಗಿ ಜನ್ನ ಕಂದವನ್ನಾರಿಸಿಕೊಂಡಿದ್ದಾನೆ.

ಒಟ್ಟಿನಲ್ಲಿ 'ಯಶೋಧರ ಚರಿತೆ' ಕವಿಯ ಕುಸುರಿ ಕೆಲಸದಿಂದ ತನ್ನ ಅಲ್ಪ ಗಾತ್ರದಲ್ಲಿ ಕೆಲವು ಹಿರಿಯ ಗುಣಗಳನ್ನು ಮೈಗೂಡಿಸಿಕೊಂಡು ಸತ್ಕಾವ್ಯವಾಗಿದೆ. ಮುದ್ದಾದ ಪುಟ್ಟ ದಂತದ ವಿಗ್ರಹಕ್ಕೆ ಅದನ್ನು ಹೋಲಿಸಬಹುದು.

## ೩. 'ಅನಂತನಾಥ ಪುರಾಣ'

### ಕಥಾಸಾರ

(೧) ಕೌಶಲದ ಅಯೋಧ್ಯಾಪುರಿಯನ್ನು ಸಿಂಹಸೇನನೆಂಬ ದೊರೆ ಆಳುತ್ತಿದ್ದ. ಅವನ ಪತ್ನಿ ಜಯಶ್ಯಾಮೆ. ಒಂದು ದಿನ ಅರಸ ಒಡ್ಡೋಲಗದಲ್ಲಿರುವಾಗ, ಇಷ್ಟಶರ್ಮನೆಂಬ ಒಬ್ಬ ಬ್ರಾಹ್ಮಣ ತನ್ನ ಶಿಷ್ಯನೊಡನೆ ಆಗಮಿಸಿದ. ಅವನ ಹಿಂದೆ 'ಸ್ಮರಚಕ್ರೇಶನ ರಾಜ್ಯಲಕ್ಷ್ಮಿ'ಯೆನಿಸುವ ಸುಂದರಿಯೊಬ್ಬಳಿದ್ದಳು. ಆ ವಿಪ್ರ ರಾಜನನ್ನು ಆಶೀರ್ವದಿಸಿದ. ಅವನೊಡನಿರುವ ಮನೋಹರಿ ಯಾರೆಂದು ಮಂತ್ರಿಗಳು ಕೇಳಿದಾಗ, 'ಈಕೆ ಮದನಮಂಜರಿ, ಭುಜಂಗಸೇನನೃಪನ ಮಗಳು' ಎಂದು ದ್ವಿಜ ಹೇಳಿದ. ಆಗ ಜಯಶ್ಯಾಮೆ ಮತ್ತು ಮದನಮಂಜರಿ ಪರಸ್ಪರ ಆಲಿಂಗಿಸಿಕೊಂಡರು. ಈಕೆ ನಮಗೇನಾಗಬೇಕೆಂದು ದೊರೆ ಕೇಳಿದ; ಜಯಶ್ಯಾಮೆ ಹೀಗೆ ತಿಳಿಸಿದಳು: "ಈಕೆ ನನ್ನ ಸೋದರಿ. ಬಾಲ್ಯದಲ್ಲಿ ಈಕೆಯನ್ನು ಉತ್ಪಲಚೂಡನೆಂಬ ವಿದ್ಯಾಧರ ಎತ್ತಿಕೊಂಡು ಹೋದ. ಅನಂತರ ಬೆಳೆಯಿಸಿ, ಮತ್ತೆ ತಂದು ತೋರಿದ. ಆಗ ಭುಜಂಗಸೇನ ಇಬ್ಬರಿಗೂ ಮದುವೆ ಮಾಡಿದ. ಹೀಗೆಂದು ಕೇಳಿದ್ದೆ. ಈಗ ಈಕೆಯನ್ನು ಕಂಡೆ."

ಅನಂತರ ಸಿಂಹಸೇನ, "ಭುಜಂಗಸೇನರು ರಾಜ್ಯವನ್ನು ಮಗ ಕೀರ್ತಿಶೇಖರನಲ್ಲಿರಿಸಿದರೆಂದು ಕೇಳಿದ್ದೇವೆ. ಮೈದುನ ಕ್ಷೇಮವೇ ?" ಎಂದು ಕುಶಲವನ್ನು ವಿಚಾರಿಸಿದ. ಆಗ ಮದನಮಂಜರಿ ಹೀಗೆ ಹೇಳಿದಳು: "ಕುಶಲದಿಂದಿದ್ದಾರೆ. ನಂದೀಶ್ವರಾಷ್ಟಮಿಯಲ್ಲಿ ಕೀರ್ತಿಶೇಖರ ತನ್ನ ಭಾವನೊಡನೆ ಕುರುವಿಂದವೆಂಬ ಗಿರಿಗೆ ಹೋಗಿ 'ಜಯಶ್ಯಾಮೆಗೆ ಪುತ್ರೋದ್ಭವವೆಂದು?' ಎಂಬುದಾಗಿ ಮುನೀಂದ್ರವೃಂದಾರಕನನ್ನು ಕೇಳಿದ. ಮುನಿ ತಿಳಿಸಿದ್ದನ್ನು ಇಷ್ಟಶರ್ಮರು ನಿರೂಪಿಸುತ್ತಾರೆ. ಅವರಿಂದ ಅವಧಾರಿಸಿ". ಆಗ ಇಷ್ಟಶರ್ಮ ಕಥೆಯನ್ನು ಹೇಳತೊಡಗಿದ:

(೩) "ಕೋಸಲದೇಶದ ಅರಿಷ್ಟನಗರಕ್ಕೆ ಪದ್ಮರಥ ರಾಜನಾಗಿದ್ದ. ಅವನ ರಾಣಿ ಲಕ್ಷ್ಮೀಮತಿ, ಮಗ ಮೇಘರಥ. ಒಮ್ಮೆ ದೊರೆ ಓಲಗದಲ್ಲಿರುವಾಗ ಒಬ್ಬ ಯೋಗಿ ಬಂದು, ವಸಂತಸುಭಗವೆಂಬ ತನ್ನ ತಪೋವನವನ್ನು ಕುರಿತು ಹೇಳಿದ. ಅನಂತರ ಅರಸ ಎಲ್ಲರೊಡನೆ ಆ ವನಕ್ಕೆ ನಡೆದ. ಅಲ್ಲಿನ ಶಾಂತಿ ಅವೈರಗಳನ್ನು ಕಂಡು ರಾಜನಿಗೆ ಸಂತಸವಾಯಿತು. ಅವನು ಜಿನಮಂದಿರವನ್ನು ಹೊಕ್ಕು ಭಟ್ಟಾರಕನನ್ನು ನೋಡಿ, ಅವನನ್ನು ಅರ್ಚಿಸಿದ. ಆ 'ಸ್ವಯಂಪ್ರಭ'ಮುನಿ ಅರಸನನ್ನು ಹರಸಿ, 'ಕಿಚ್ಚುದುದಜೊಳೆ ತಿಳಿವಂತಿರೆ' ಜೈನಧರ್ಮವನ್ನು ಬೋಧಿಸಿದ. ರಾಜ ನಗರಕ್ಕೆ ಮರಳಿದ. ಅಂದಿನಿರುಳು ಉಲ್ಕಾಪಾತವನ್ನು ಕಂಡು ನಿರ್ವೇಗಪರನಾದ. ಮಗನಿಗೆ ರಾಜ್ಯಭಾರ ವಹಿಸಿ ಪಟ್ಟಗಟ್ಟಿದ. ಬಳಿಕ ವನಕ್ಕೆ ಆಗಮಿಸಿ, ಉಗ್ರತಪವನ್ನೆಸಗಿ, ಪ್ರತಿಮಾಯೋಗವನ್ನು ಕೈಕೊಂಡು ಮಡಿದು ಅಚ್ಯುತಕಲ್ಪವನ್ನು ಸೇರಿದ: ಅಲ್ಲಿ ಇಂದ್ರನಾದ. ಅವನೇ ಅನಂತ. ಹದಿನಾಲ್ಕನೆಯ ಜಿನ; ಅವನು ನಿಮಗೆ ಮಗನಾಗಿ ಹುಟ್ಟುತ್ತಾನೆ."

(೪) ತರುವಾಯ ಅಪ್ಸರೆಯರು ಜಯಶ್ಯಾಮೆಯನ್ನು ಓಲೈಸಿದರು; ವಾದ್ಯನರ್ತನಗಳಾದುವು. ಇಂದ್ರನಾರಿಯರು ಬಂದು ರಾಣಿಗೆ ಸ್ನಾನ ಮಾಡಿಸಿದರು. ಆಕೆ ಹಲವು ಶುಭಸ್ವಪ್ನಗಳನ್ನು ಕಂಡಳು. ಕಡೆಯಲ್ಲಿ

ಬಿಳಿಯಾನೆ ಮೊಗವನ್ನು ಹೊಕ್ಕುದನ್ನು ನೋಡಿದಳು. ಕಾಲಕ್ರಮದಲ್ಲಿ ಜಿನಸಂಭವವಾಯಿತು. ಇಂದ್ರನಿಂದ ಜನ್ಮಾಭಿಷೇಕೋತ್ಸವ ನಡೆಯಿತು.

ಅನಂತ ಬೆಳೆದಮೇಲೆ ರತ್ನಮಾಲೆಯೊಡನೆ ಅವನಿಗೆ ಮದುವೆಯಾಯಿತು. ಆತ ವೈಭವದಿಂದ ವನವಿಹಾರ ಕೈಕೊಂಡ. ಅವನಿಗೆ ವಿಜಯನೆಂಬ ಕುಮಾರ ಜನಿಸಿದ. ಹದಿನೈದು ಲಕ್ಷವರುಷ ಸಾಮ್ರಾಜ್ಯ ಸುಖವನ್ನನುಭವಿಸಿದ ಮೇಲೆ, ಒಂದು ದಿವಸ ಮಿಂಚನ್ನು ಕಂಡು ಅನಂತ ವೈರಾಗ್ಯಪರನಾದ. ನರಕವನ್ನು ವರ್ಣಿಸಿ, ಧರ್ಮಬೋಧೆ ಮಾಡಿದ. ಅನಂತರ ಇಂದ್ರನಿಂದ ಪರಿನಿಷ್ಕ್ರಮಣೋತ್ಸವ ನೆರವೇರಿತು. ಪಂಚಾಶ್ಚರ್ಯಗಳು ಕಂಡುವು. ಅನಂತ ಉಗ್ರತಪಸ್ಸನ್ನು ಕೈಗೊಂಡ. ಅವನಿಗೆ ಕೇವಲ ಜ್ಞಾನೋದಯವಾಯಿತು. ಬಳಿಕ ಸಮವಸರಣದಲ್ಲಿ ಧರ್ಮಪ್ರವಚನ ನಡೆಯಿತು.

ಇತ್ತ ವಿಜಯಕುಮಾರ ವಿರಹ ತಾಳಲಾರದೆ, ತಂದೆಯನ್ನು ಕಾಣಲು ಬಂದ. ಅವನೊಂದು ಅಶ್ವತ್ಥವೃಕ್ಷದಡಿಯಲ್ಲಿ ಕುಳಿತಿರುವಾಗ, ಶಾಂತಿಶುಭಾಚಾರ್ಯರು ಬಂದು, ಇದೇ ಮರದ ಕೆಳಗೆ ನಿನ್ನ ತಂದೆಗೆ ಕೇವಲಜ್ಞಾನ ಲಭಿಸಿತೆಂದು ತಿಳಿಸಿದರು; ಅನಂತ ವ್ರತವನ್ನು ಉಪದೇಶಿಸಿ, ಅನಂತನಿರುವ ತಾಣವನ್ನು ನಿರ್ದೇಶಿಸಿದರು. ವ್ರತಾನುಷ್ಠಾನದಿಂದ ವಿಜಯ ಅಲ್ಲಿಗೆ ಹೋಗಿ ಜಿನಪೂಜೆಯನ್ನೆಸಗಿದ.

ಈ ನಡುವೆ ಮದನಪತಾಕೆಯೆಂಬ ಖಚರಾಂಗನೆ ಜಿನನಿಗೆರಗಿ ಹಿಂದಿರುಗುತ್ತಿರುವಾಗ ಚಿತ್ರಲತೆಯೆಂಬ ಗೆಳತಿಯನ್ನು ಕಂಡು ಸಮವಸರಣ ಮಂಟಪದಲ್ಲಿ ತಾನು ಕೇಳಿದ ಕಥೆಯೊಂದನ್ನು ಹೇಳಿದಳು. ಸುಪ್ರಭನೆಂಬ ನಾಲ್ಕನೆಯ ಬಲದೇವ ಜಯನಾಥ ಗಣಧರರಲ್ಲಿಗೆ ಬಂದು ತನ್ನ ಪೂರ್ವಜನ್ಮ ವೃತ್ತಾಂತವನ್ನೂ ನಾಲ್ಕನೆಯ ವಾಸುದೇವನಾದ ತನ್ನ ತಮ್ಮನ ವೃತ್ತಾಂತವನ್ನೂ ಕೇಳಿದಾಗ ಅವರು ಈ ಕಥೆಯನ್ನು ತಿಳಿಸಿದರಂತೆ. ಅದು ಹೀಗಿದೆ:

(೪) ಚಂಡಶಾಸನನಿಂದ ಅಪಹೃತಳಾದ ತನ್ನ ಮಡದಿ ಅಸು ನೀಗಿದ ವಾರ್ತೆಯನ್ನು ಕೇಳಿದ ವಸುಷೇಣ ವೈರಾಗ್ಯ ತಳೆದು, ಮಗನಿಗೆ ಪಟ್ಟಕಟ್ಟಿ ದೀಕ್ಷೆವಹಿಸಿದ: ತಪಸ್ಸಿನಿಂದ ದೇಹತ್ಯಾಗ ಮಾಡಿ ಸಹಸ್ರಾರ ಕಲ್ಪದಲ್ಲಿ ಸುರನಾದ. ಅಲ್ಲಿ ಅವನಿಗಿಂತ ಮುನ್ನವೇ ಪ್ರತೀಂದ್ರನೊಬ್ಬ ಹುಟ್ಟಿದ್ದ: ಅವನು ಯಾರೆಂದರೆ, ವತ್ಸಕಾವತಿ ದೇಶದಲ್ಲಿ ಆನಂದಪುರ ವನ್ನಾಳುತ್ತಿದ್ದು, ವೈರಾಗ್ಯದಿಂದ ಭವವನ್ನು ತೊರೆದ ಮಹಾಬಲನೆಂಬ ಅರಸ.

(೫) ಇತ್ತ ಜಂಬೂದ್ವೀಪದ ಭರತಕ್ಷೇತ್ರದ ದ್ವಾರಾವತೀ ಪುರದಲ್ಲಿ ಸೋಮಪ್ರಭನೆಂಬ ದೊರೆ ಸೀತೆ, ಜಯಾವತಿ ಎಂಬ ಹೆಂಡಿರೊಡನೆ ಆಳುತ್ತಿದ್ದ. ಅವನು ರಾಜ್ಯಸುಖವನ್ನು ಭೋಗಿಸುತ್ತಿರಲು, ಸೀತೆಗೆ ಪುತ್ರದೋಹದವುಂಟಾಯಿತು. ಅದನ್ನರಿತ ರಾಜ ಅವಳ ಮನೋರಥ ಈಡೇರುವುದೆಂದು ಸಂತೈಸಿದ. ಅನಂತರ ಅರಸಿಗೆ ಷೋಡಶ ಶುಭಸ್ವಪ್ನಗಳಾದುವು. ಅದನ್ನು ತಿಳಿದ ಸೋಮಪ್ರಭ, "ನಿನ್ನ ಗರ್ಭದಲ್ಲಿ ಶಲಾಕಾಪುರುಷನಾದ ಚಕ್ರಧರ ಪುರುಷೋತ್ತಮ ಜನಿಸುತ್ತಾನೆ" ಎಂದು ನುಡಿದ. ಹಿಂದೆ ಮಹಾಬಲನಾಗಿದ್ದವನು ಜಯಾವತಿಯ ಗರ್ಭದಲ್ಲೂ, ವಸುಷೇಣನಾಗಿದ್ದವನು ಸೀತೆಯ ಉದರದಲ್ಲೂ ನೆಲೆಗೊಂಡರು. ಇವರು ಬಲದೇವ ವಾಸುದೇವರಾಗಿ ಹುಟ್ಟಿದರು. ರಾಮ ಕೃಷ್ಣರಿಬ್ಬರೂ ಲೀಲೆಯಿಂದ ಬೆಳೆಯುತ್ತಿದ್ದರು.

ಅಂದು ಸತ್ತ ಚಂಡಶಾಸನನೇ ಮಧುಕೈಟಭನೆಂಬ ದೈತ್ಯನಾಗಿ ವಾರಣಾಸಿಯಲ್ಲಿ ಹುಟ್ಟಿ ಅರ್ಧಚಕ್ರಿಯಾಗಿದ್ದ. ಅವನ ಉದ್ಧಟತನಕ್ಕೆ, ಪ್ರತಾಪಾಗ್ನಿಗೆ ತ್ರೈಲೋಕ್ಯವೂ ತಲ್ಲಣಿಸುತ್ತಿತ್ತು. ಒಂದು ದಿನ ಕಲಹಪ್ರಿಯ ನಾರದ ಅಭ್ರದಿಂದಿಳಿದು ದೈತ್ಯನ ಆಸ್ಥಾನಕ್ಕೆ ಬಂದ; ಕುಶಲ ಸಂಭಾಷಣೆ ಯಾದನಂತರ ತಾನು ಬಂದ ಕಾರ್ಯವನ್ನರುಹಿದ. ಸೋಮಪ್ರಭ ಪುತ್ರ ರಾದ ಬಲಭದ್ರ ನಾರಾಯಣರು ಕೊಬ್ಬಿ ಮೆರೆಯುತ್ತಿದ್ದಾರೆಂದು ತಿಳಿಸಿ,

ಅವರಲ್ಲಿದ್ದ ಆನೆಯ ಹಿರಿಮೆಯನ್ನು ಬಣ್ಣಿಸಿದ. ದೈತ್ಯನಿಗೆ ಅವರಲ್ಲಿ ವೈರವೂ ಆನೆಯಲ್ಲಿ ಲೋಭವೂ ಉಂಟಾದುವು. ಬಳಿಕ ನಾರದ ದ್ವಾರಾವತಿಗೆ ಬಂದು, ರಾಮಕೇಶವರಿಗೆ ಮಧುಕೈಟಭನ ದುಷ್ಟತನವನ್ನೂ ಅವನಿಂದಾಗುತ್ತಿರುವ ಧರ್ಮನಾಶವನ್ನೂ ವರ್ಣಿಸಿದ. ಅವನ ಶೌರ್ಯವನ್ನು ಹೊಗಳಿ, ಅವರಿಂದ ದೈತ್ಯ ನಿಗ್ರಹವಾಗಬೇಕೆಂದು ಹೇಳಿ ತೆರಳಿದ.

ಅನಂತರ, ಮಧುಕೈಟಭ ಕಳುಹಿಸಿದ ದೂತ ಬಂದು ಸಂಧಿಯ ಬಯಕೆಯನ್ನು ವ್ಯಕ್ತಪಡಿಸಿದ. ಅದನ್ನು ನಿರಾಕರಿಸಿ ಬಲದೇವ ಕೃಷ್ಣರು ಯುದ್ಧವನ್ನು ನಿಶ್ಚಯಿಸಿದರು. ಮಣಿಚೂಡನೆಂಬ ಖೇಚರ ಅವರಿಗೆ ನಿಜವಿದ್ಯೆಯನ್ನು ತಿಳಿಸಿ ಹೋದ. ಸಮರಭೇರಿ ಮೊಳಗಿತು; ವಿಜಯ ಯಾತ್ರೆ ಹೊರಟಿತು. ಈ ಸುದ್ದಿಯನ್ನು ಕೇಳಿದ ದೈತ್ಯ ಕೋಪಾವಿಷ್ಟನಾದ; ಅವನ ಕಡೆಯ ಅಸುರರೆಲ್ಲ ತಮ್ಮ ತಮ್ಮ ಪ್ರತಾಪವನ್ನು ಕೊಚ್ಚಿಕೊಂಡರು. ಮಧುಕೈಟಭ ಪುಷ್ಪಕವನ್ನೇರಿ ಸೈನ್ಯದೊಡನೆ ಬಲದೇವ ಪುರುಷೋತ್ತಮರನ್ನೆದುರಿಸಿದ. ಅವನು ಮಕರವ್ಯೂಹ ರಚಿಸಿದ; ಅದನ್ನು ಭೇದಿಸುವ ಸೂಚೀವ್ಯೂಹ ಪ್ರತಿಪಕ್ಷದಿಂದ ರಚಿತವಾಯಿತು.

ಎರಡು ಸೇನೆಗಳಿಗೂ ಪ್ರಚಂಡ ಯುದ್ಧವಾಯಿತು. ಮಧು ತನ್ನ ಚಕ್ರವನ್ನು ಕೃಷ್ಣನ ಮೇಲೆ ಪ್ರಯೋಗಿಸಿದ. ಅದು ಕೃಷ್ಣನನ್ನು ಬಲಗೊಂಡು, ಅವನ ಭುಜದಲ್ಲಿಯೇ ನೆಲಸಿತು. ಅದನ್ನೇ ಪ್ರಯೋಗಿಸಿ ಪುರುಷೋತ್ತಮ ದೈತ್ಯನ ತಲೆಯನ್ನು ಹಾರಿಸಿದ. ಬಲರಾಮಕೃಷ್ಣರು ದ್ವಾರಾವತಿಗೆ ಮರಳಿದರು. ಬಲಭದ್ರ ಕೃಷ್ಣನಿಗೆ ಚಕ್ರೇಶಪಟ್ಟವನ್ನು ಕಟ್ಟಿದ.

ಇಷ್ಟು ಹೇಳಿ ಮದನಪತಾಕೆ ಚಿತ್ರಲತೆಯೊಡನೆ ಮತ್ತೆ ಜಿನೇಂದ್ರಸಭೆಯನ್ನು ಹೊಕ್ಕಳು. ಬಳಿಕ ಅನಂತನಾಥನ ಪರಿನಿರ್ವಾಣೋತ್ಸವವೂ, ಅದರ ಅಂಗವಾಗಿ ಇಂದ್ರನ ಆನಂದ ನೃತ್ಯವೂ ನಡೆದುವು.

## ಕವಿತೆಯ ರೀತಿ

'ಅನಂತನಾಥ ಪುರಾಣ' ಹದಿನಾಲ್ಕನೆಯ ಜಿನನಾದ ಅನಂತನಾಥನ ಕಥೆಯನ್ನು ವಸ್ತುವಾಗಿ ಉಳ್ಳ ಹದಿನಾಲ್ಕು ಆಶ್ವಾಸಗಳ ಪ್ರೌಢ ಚಂಪೂಕಾವ್ಯ; ಸಂಪ್ರದಾಯದಂತೆ ಅದರಲ್ಲಿ ಬಲದೇವ ವಾಸುದೇವರ ಕಥೆಯೂ ಸೇರಿಕೊಂಡಿದೆ. ಗುಣಭದ್ರಾಚಾರ್ಯರ 'ಉತ್ತರಪುರಾಣ' ಹಾಗೂ ಸ್ವಲ್ಪಮಟ್ಟಿಗೆ ಚಾವುಂಡರಾಯನ 'ತ್ರಿಷಷ್ಟಿಶಲಾಕಾ ಪುರುಷ ಪುರಾಣ'–ಇವು ಜನ್ನನಿಗೆ ಆಧಾರಗಳು

'ಅನಂತನಾಥಪುರಾಣ'ದಲ್ಲಿ ಜನ್ನ ಸಂಪ್ರದಾಯದ ಕಟ್ಟಿಗೆ ಸಿಲುಕಿದ್ದಾನೆ; ಮಹಾಕಾವ್ಯದ ಶಾಸ್ತ್ರೋಕ್ತ ಲಕ್ಷಣಗಳನ್ನೆಲ್ಲ ನಿಷ್ಠೆಯಿಂದ ಅನುಸರಿಸಿದ್ದಾನೆ. ಮಹಾಕಾವ್ಯದ ಹದಿನೆಂಟು ಅಂಗಗಳೂ ಅವನ ಕೃತಿಯಲ್ಲಿ ತಪ್ಪದೆ ಪ್ರತ್ಯಕ್ಷವಾಗಿವೆ. ಆದರೆ ಅದು ಹೆಸರಿನಲ್ಲಿ ಮಾತ್ರ ಮಹಾಕಾವ್ಯ, ಉಸಿರಿನಲ್ಲಲ್ಲ. 'ಯಶೋಧರ ಚರಿತೆ'ಯನ್ನು ಬರೆದ ಕವಿಯೇ 'ಅನಂತನಾಥ ಪುರಾಣ'ವನ್ನು ಬರೆದನೇ ಎಂದು ಸಂದೇಹಿಸುವಂತಾಗುತ್ತದೆ; ಮೊದಲು ರಚಿಸಿದ ಕೃತಿಯಲ್ಲಿರುವ ಪರಿಣತಿ ಅನಂತರ ಬರೆದ ಕೃತಿಯಲ್ಲಿ ಇಲ್ಲದಿರುವುದು ಸೋಜಿಗವಾಗಿ ಕಾಣುತ್ತದೆ. ಇದರಲ್ಲಿ ಸ್ವೋಪಜ್ಞತೆಯ ಬದಲು ವಿದ್ವತ್‌ಪ್ರದರ್ಶನದ ಮತ್ತು ಪರಾನುಕರಣದ ಚಾಪಲ್ಯ ಮೇಲುಗೈಯಾಗಿವೆ. ಇಲ್ಲಿ ನಾವು ಕಾಣುವುದು ಕವಿಯ ಚಮತ್ಕೃತಿ, ವಾಗಾಡಂಬರ, ಅಲಂಕಾರಗಳ ಜಾಲ, ಕವಿಸಮಯಗಳ ಕೋಲಾಹಲ. ಇವುಗಳ ಅಬ್ಬರದಲ್ಲಿ ಮಾನವೀಯ ಸ್ವಾರಸ್ಯ ತಲೆಮರೆಸಿಕೊಂಡಿದೆ. ಅನಂತನಾಥನ ಕಥೆ ವಾಸ್ತವವಾಗಿ ಬಹಳ ಚಿಕ್ಕದು; 'ಉತ್ತರಪುರಾಣ'ದಲ್ಲಿ ಅದು ಕೇವಲ ೮೫ ಶ್ಲೋಕಗಳಲ್ಲಿದೆ; ಚಾವುಂಡರಾಯನಲ್ಲಿ ಸುಮಾರು ೨೦ ಪಂಕ್ತಿಗಳಷ್ಟಿದೆ. ಇದನ್ನು ಜನ್ನ ಎಳೆದು, ಹಿಗ್ಗಿಸಿ ಹದಿನಾಲ್ಕು ಆಶ್ವಾಸಗಳಷ್ಟು ದೊಡ್ಡದು ಮಾಡಿದ್ದಾನೆ.

ಈ ಪ್ರಯತ್ನದಲ್ಲಿ ಕಥೆ ಜಾಳುಜಾಳಾಗಿದೆ, ಅದರಲ್ಲಿ ಐಕ್ಯವೆಂಬುದಿಲ್ಲ. ಅನವಶ್ಯಕವಾದ ವರ್ಣನೆಗಳು ತುಂಬಿತುಳುಕುತ್ತಿವೆ; ಪಂಚಕಲ್ಯಾಣಗಳು, ಅನಂತವ್ರತ ಮುಂತಾದ ಮತೀಯ ಪ್ರಕ್ರಿಯೆಗಳು ಬೇರೆ ಕಿಕ್ಕಿರಿದಿವೆ. 'ಯಶೋಧರ ಚರಿತೆ'ಯಲ್ಲಿ ದೇಸಿಯನ್ನು ಮೆರೆದ ಜನ್ನನ ಶೈಲಿ ಇಲ್ಲಿ ಸಂಸ್ಕೃತ ಭೂಯಿಷ್ಠವಾಗಿ ಗಡುಸಾಗಿದೆ. ಈ ಎಲ್ಲ ಕಾರಣಗಳಿಂದ ಜನ್ನನ ಕೃತಿ ರಸವತ್ಕವಿತೆಯಾಗುವುದರ ಬದಲು ನಿಜವಾಗಿಯೂ 'ಪುರಾಣ'ವಾಗಿ ಪರಿಣಮಿಸಿದೆ. ಕವಿಯ ಪ್ರತಿಭಾವಿಲಾಸವನ್ನು ಕ್ವಚಿತ್ತಾಗಿ ಕಾಣಬಹುದು.

'ಅನಂತನಾಥ ಪುರಾಣ'ದ ಮತ್ತೊಂದು ವೈಲಕ್ಷಣ್ಯವೆಂದರೆ, ಶೃಂಗಾರದ ಅತಿರೇಕ: ಅದೂ ಸಂಪ್ರದಾಯಬದ್ಧವಾದ ಶೃಂಗಾರ. ತನ್ನ ಕಾವ್ಯವು ಬಾಳ ಬಟ್ಟೆ[1] ಮತ್ತು ಪರಮಾಗಮವೇ ಹೊರತು ಜಾರಚೋರರ ಕಥೆಯಲ್ಲವೆಂದು ಹೇಳಿದ ಕವಿ, ಭಾವೀ ಜಿನನನ್ನು ವೇಶ್ಯಾವಾಟಿಕೆಗೆ ಕರೆದೊಯ್ಯುತ್ತಾನೆ; ಆ ಚಂದ್ರಿಕಾವಿಹಾರದ ವರ್ಣನೆಯನ್ನೋದಿದರೆ, ಇದೇನು ಜಿನಕಥೆಯೋ ಅಥವಾ 'ಸೂಳೆಯರ ತೋಳೆ ತೊಟ್ಟಿಲಾಗಿ ಬಳೆದ' ವಿಟಜನರ ಚರಿತವೋ ಎಂಬ ಶಂಕೆ ಮೊಳೆಯುತ್ತದೆ. ಪವಿತ್ರವಾದ ಧಾರ್ಮಿಕ ಕಥೆಗೆ ಶೃಂಗಾರದ ಆವರಣ ತಕ್ಕುದಲ್ಲವೆಂಬುದು ಜನ್ನನಿಗೆ ಏಕೆ ಹೊಳೆಯಲಿಲ್ಲವೊ ತಿಳಿಯದು. 'ಅಂಗೋದ್ಭವನ ಸಕಲ ಸಾಮ್ರಾಜ್ಯ'ವನ್ನು ಬಣ್ಣಿಸುವಲ್ಲಿ ಕವಿಗೆ ಸಂಯಮ, ಔಚಿತ್ಯದೃಷ್ಟಿ, ಇರಬೇಕಿತ್ತು.

ಜನ್ನನ ಸಂಸ್ಕೃತಮಯ ಶೈಲಿಗೆ ಇದೊಂದು ನಿದರ್ಶನ:

ಮಕರಾಂಕಾವಾಸಭೋಗ ಪ್ರಹತಪಣವ ಸಂವಾದಿಸೌಭಾಗ್ಯಘಂಟಾ
ನಿಕುರುಂಬಾಂದೋಳ ಲೀಲಾಯುವತಿ ಕಬರಿ ಕಸ್ತೂರಿಕಾರೇಣು ಸಂವಾ
ಹಕ ಚಂಚತ್ಕೀರ ಸಾರೀ ಪರಿತಗಳಿತ ಗಾಳಿಪ್ರದಂ ಮಾಟಕೂಟಾಂ
ತಿಕ ಹೇಳೋದ್ಯಾನಪಾಳಕಂ ಸುಟಿಪುದು ಗಣಿಕಾವೇಶ್ಮ ಚಾರಂ ಸಮೀರಂ

---

[1] ಬಟ್ಟೆ =ಮಾರ್ಗ

ಇನ್ನು ಗದ್ಯದಲ್ಲಂತೂ 'ಕರಕಮಳ ಕುಟ್ಮಳ ಘಟಿತ ನಿಟಿಳಾರ್ಧ ಮೃಗಾಂಕನ್, ಅಖಿಳ ಮಂಗಳಾಶೀಸ್ತರಂಗಿತಾನನ ಕುಶೇಶಯನ್' ಎಂಬೀ ತೆರದ ದೀರ್ಘ ಸಮಾಸಗಳು ಸಾಮಾನ್ಯ.

ಆದರೆ ಜನ್ನ ಅಚ್ಚಗನ್ನಡದಲ್ಲಿ ಸೊಗಸಾಗಿ ಬರೆಯಬಲ್ಲ; ಚೆಲುವಾದ ಸ್ವಭಾವೋಕ್ತಿ ಚಿತ್ರಗಳನ್ನು ಕೊಡಬಲ್ಲ. ಕಾರ್ಗಾಲದ ವರ್ಣನೆ ಹೀಗೆ ಚೇತೋಹಾರಿಯಾಗಿ ಲಲಿತರಗಳೆಯಲ್ಲಿ ಮೊದಲಾಗುತ್ತದೆ:

ಅಂತು ಮೊಗಮಂ ನೋಡಲಿಳೆಯ ಕಣ್ದೆರೆದಂತೆ
ಮುಗಿಬೀಡು ರಜಧರಣಿಯೊಳ್ ನೆಗೆದುಪೋರಂತೆ
ಕಲ್ಲ ಪೊಗರೆಯೊಳಿಟ್ಟ ಕಾರ್ಮುಗಿಲ ಮೊಟ್ಟೆಗಳ್
ತಾಮೊಸಿಸಿ ಪರ್ಬದುವು ಪೆರ್ಜೇನ ಪುಟ್ಟುಗಳ್
ತರದೆ ಪಾಱಿದುವು ಬೆಳ್ಳಕ್ಕಿ ನೂಲ್ದೆಗೆದಂತೆ.
ನೆರೆದ ಕಾಮನ ಬಿಲ್ಲ ಬಿಳಿಯ ತಿರು[1]ಬಿಗಿದಂತೆ !

ಕವಿಯ ಚಮತ್ಕಾರಗಳು ಕೆಲವೆಡೆ ಹೃದ್ಯವಾಗಿರುತ್ತವೆ. ಅಂಥದೊಂದು:
ಅವಿರಳವಾದ ತುಂಗಕುಚಭಾರದೆ ತೋಳ್ ಸೆಸೆದಿಟ್ಟ ತಕ್ಕಿನೊಳ್[2] ಕವಣೆಯ ಗುಂಡು ಪಾಯುವು. ಮೃಗಾವಳಿ ಪಾಯುವು ಕೆಯ್ಯ . ಪಾಗುಂ ಯುವತಿಯರ್ ಅರ್ಮ ಚಪ್ಪರಿಸೆ ಕೋಗಿಲೆಯುಲಿಂಚರಮೊಂದು ಪೆರ್ಚೆ ಪಾಱುವು ಗಿಳಿವಿಂಡು, ಪಾಂಥರೆದೆ ಪವ್ವನೆ ಪಾಱುವುದಾ ಪ್ರದೇಶದೊಳ್!

ಉಲ್ಕಾಪಾತದ ವರ್ಣನೆ ಮೆಚ್ಚುವಂತಿದೆ:
ಚಿರಮಲ್ತು ಎನ್ನಯ ತೇಜಮುಂ ಕಡೆಯೊಳೀ ಪಾಂಗೆ[3] ಎಂಬುದಂ ಸಾಱುವಂತಿರೆ, ದುರ್ಬೋಧ ಜನಾಂತರಂಗ ತಿಮಿರಕ್ಕೆ ಉದ್ಯೋತಿಯುಂ[4] ತೋಱುವಂತಿರೆ, ಸಂಸಾರ ಸುಖಾನುಯೋಗ ಶತಪೂರಿತ ಊರ್ಣ[5]ಪುಂಜಕ್ಕೆ ದಳ್ಳುರಿ ಬಿಟ್ಟಂತಿರೆ ಜರ್ಮ ತಂದುದೆರ್ದೆಗೆ ಉಲ್ಕಾಪಾತಂ ಆತಂಕಮಂ

---

[1] ತಿರು=ಬಿಲ್ಲಿನ ಹಗ್ಗ. [2] ತಕ್ಕು=ಶಕ್ತಿ. [3] ಪಾಂಗು=ರೀತಿ. [4] ಉದ್ಯೋತಿ=ಬೆಳಕು. [5] ಊರ್ಣ=ಉಣ್ಣೆ.

ಪದ್ಮರಥ ವಿರಕ್ತನಾಗಿ ಕಾಡಿಗೆ ಹೊರಟಾಗ, ಅರಸಿಯರ ಶೋಕವನ್ನು ಕವಿ ಚಿತ್ತಸ್ಪರ್ಶಿಯಾಗುವಂತೆ ಹೀಗೆ ನಿರೂಪಿಸಿದ್ದಾನೆ:

ಮನದೊಳಗಂಧಕಾರದ ಕಡಲ್ ಕವಿತರ್ಪುದು ನಿನ್ನ ವಕ್ತ್ರಚಂ
ದ್ರನ ಬೆಳಗೊಮ್ಮೆ ತೋರದೊಡೆ; ವಲ್ಲಭ ! ನೀಂ ಬಿಸುಟಂತು ಪೋಗೆ ಜೀ
ವನಂ ಎಮಗೆಂತು ನಾಥ ? ಬರವೇಳ್ ಎನ್ನಲಾಗದೆ, ದೇವ ? ತತ್ತಪೋ
ವನತರುಷಂಡಂ ಎಮ್ಮಂ ಒಳಕೊಳ್ಳದೆ ಪೇಳ್ ಭುವನೈಕ ಭೂಷಣಾ !

ಕವಿ ಮಾನವಭಾವಗಳ ಮಿಡಿತವನ್ನು ಗ್ರಹಿಸದೇ ಇಲ್ಲ ಎಂಬುದಕ್ಕೆ ಸೀತೆಯ ಪುತ್ರಾಕಾಂಕ್ಷೆಯ ನಿರೂಪಣೆ ಒಳ್ಳೆಯ ಸಾಕ್ಷಿ. ಅವಳ ಅಳಲು ಹೀಗೆ ವ್ಯಕ್ತವಾಗಿದೆ:

ಪದೆದು[1] ಅಪುರ್ದಪ್ಪಿಕೊಂಡು ಬಿಗಿಯಪ್ಪಿ ತನೂಜನ ಮೆಯ್ಯ ಧೂಳಿ ಪ
ತ್ತದ ನಳಿತೋಳ್ಗಳೇಕೆ ? ಮೊಲೆಯುಂಬ ಕುಮಾರನ ಕಣ್ಣ ಕಜ್ಜಳಂ[2]
ಪುದಿಯದ ಉರೋಜ[3]ಮೇಕೆ ? ಪರಿಚುಂಬಿಸೆ, ಕಂದನ ಕೈದೊಡಂಕೆ ಸೂ
ಸದ ಕುರುಳೇಕೆ ? ಪೇಳ ಪೊಡೆಯೇಕವಳಿಂ ಕುಲವೆಣ್ಗೆ ಲೋಕದೊಳ್ ?

ಮಗನಂ ತೊಟ್ಟಿಲೊಳಿಟ್ಟು, ತೂಗಿ, ನಲವಿಂದಂ ಜೋಗುಳಂಬಾಡಿ, ಮೆ
ಲ್ಲಗೆಯಿಂ ಮುದ್ದು ಮೊಗಂ ತುಳಂಕೆ ಪರಸುತ್ತುಂ ನೋಡಿ, ಬಾ ದೇವ ಬಾ
ಜಗತೀವಲ್ಲಭ ಬಾರ ಮಾಣಿಕವೆ ಬಾರೆನ್ನಾನೆಯೆಂದೆತ್ತಿ, ಮೆ
ಯ್ಗೆ ಗೆವನ್ನಂ ಮೊಲೆಯೂಡಿ ತೂಪಿಳಿಪ[4]ಪುಣ್ಯಂ ನೋಂಪದಳ್ಗೆ[5]ಅಕ್ಕುಮೇ ?

"ಜಿನ ಜನನವಾದಾಗ ಬರುವ "ಪರಮ ಪವಿತ್ರನಂತೆ ಧರೆ ನೀರಜ ಮಾಡುದು...." ಎಂಬ ವರ್ಣನೆ ಶಾಂತಪ್ರಚುರವಾಗಿದೆ. ಈ ದೇಹದ ಪೋಷಣೆ "ಕೋಡಗದ ಕೈಯ ಮಾಲೆಗೆ ಬಾಡಿರ್ದಪುದು ಎಂದು ಬಣ್ಣಿದೆ

---

[1] ಪದೆದು=ಆಸೆಪಟ್ಟು. [2] ಕಜ್ಜಳ=ಕಾಡಿಗೆ. [3] ಉರೋಜ=ಸ್ತನ. [4] ತೂಪಿಳಿ =ದೃಷ್ಟಿದೋಷವನ್ನು ಪರಿಹರಿಸು. [5] ನೋಂಪದಳ್=ವ್ರತ ಮಾಡದವಳು.

ನೀರ್‌ವಳಿವಂದಂ"; ನಾರದ "ಪೊಡೆವಟ್ಟು, ಸೆಂಡಿನಂತೆ ಗಗನಕ್ಕೊಗೆದನ್;" ನರನಾಥನ ತೋಳು "ಸಮನಿಸಿದ ಕಲ್ಪಕುಜದಾರಮೆ[1] ಪಣ್ತು ಎಜಗಿದವೊಲಿತ್ತು." ಇಂತಹ ಮನೋಜ್ಞವಾದ ಉಪಮೆಗಳೂ, 'ನೀಮ್ ಆ ವೈತ್ಯನ ಕಣ್ಣ ಮುಳ್' ಎಂಬಂತಹ ದೇಸಿ ಮಾತುಗಳೂ ವಿರಳವಾಗಿ ಈ ಕಾವ್ಯದಲ್ಲಿ ಬರುತ್ತವೆ.

ಒಟ್ಟಿನಲ್ಲಿ, ಜನ್ನ 'ಅನಂತನಾಥಪುರಾಣ'ದಲ್ಲಿ ಸಂಪ್ರದಾಯ ಶರಣನಾದುದರಿಂದ ತನ್ನ ನೈಜಶಕ್ತಿಯನ್ನು ಸರಿಯಾಗಿ ಬಳಸಿಕೊಳ್ಳಲಿಲ್ಲ. ಆದ್ದರಿಂದ ಆ ಕಾವ್ಯ ಸಂಪ್ರದಾಯದ ಪಡಿಯಚ್ಚಿಗೆ ಒಂದು ಒಳ್ಳೆಯ ನಿದರ್ಶನ ಎನ್ನುವಂತಾಯಿತು; ಅವನು ಆರಿಸಿಕೊಂಡ ವಸ್ತುವೂ ಅದಕ್ಕೆ ಭಾಗಶಃ ಕಾರಣವಾಗಿದೆ. ಆದರೆ ಈ ವಿಮರ್ಶೆ ಜಿನನ ಕಥೆಗಷ್ಟೇ ಅನ್ವಯಿಸುತ್ತದೆ, ಅದರಲ್ಲಿ ಬರುವ ಚಂಡಶಾಸನೋಪಾಖ್ಯಾನಕ್ಕಲ್ಲ. ಈ ಚಂಡಶಾಸನ ಪ್ರಸಂಗ 'ಅನಂತನಾಥಪುರಾಣ'ದ ರಮ್ಯೋಜ್ವಲ ಭಾಗ. ಒಟ್ಟು ಕಾವ್ಯದ ಪ್ರಮಾಣಕ್ಕೆ ಹೋಲಿಸಿದಾಗ, ಅದು ಅಲ್ಪಗಾತ್ರದ್ದು; ಕಲಾದೃಷ್ಟಿಯಿಂದ ಉತ್ತಮವಾದುದು. ಜಿನ ಕಥೆಯೊಡನೆ ಸಾವಯವ ಸಂಬಂಧವಿಲ್ಲದ ಆ ಉಪಾಖ್ಯಾನವನ್ನು ಪ್ರತ್ಯೇಕ ಖಂಡಕಾವ್ಯವೆಂದು ಪರಿಗಣಿಸಬಹುದಾದ್ದರಿಂದ, ಅದನ್ನು ಬೇರೆಯಾಗಿಯೇ ವಿವೇಚಿಸುವುದು ಉಪಯುಕ್ತ.

## ೪. ಚಂಡಶಾಸನ ಕಥೆ

### ಕಥಾಸಾರ

ಭರತವರ್ಷದ ತೆಂಕದಿಕ್ಕಿನಲ್ಲಿ ಸುರಮ್ಯವೆಂಬ ದೇಶವಿತ್ತು. ಅದರ ರಾಜಧಾನಿ ಪಾದನಪುರ; ದೊರೆ ವಸುಷೇಣ, ಅವನ ಸತಿ ಸುನಂದೆ. ಒಂದು

---

[1] ಆರಮೆ=ತೋಟ.

ದಿವಸ ರಾಜ ವೈಹಾಳಿಯಲ್ಲಿರುವಾಗ, ಸುದರ್ಶನನೆಂಬುವವನು ಬಂದು 'ಸಹಪಾಂಸುಕ್ರೀಡಾನುಸಂಗತಬಂಧು' ಮಕರಗ್ರಾಹಪುರದ ದೊರೆ ಚಂಡ ಶಾಸನ ನೋಡಬರುತ್ತಾನೆಂದು ತಿಳಿಸಿದ. ವಸುಷೇಣನಿಗೆ ಗೆಳೆಯನ ಆಗಮನವಾರ್ತೆಯಿಂದ ಸಂತೋಷವಾಯಿತು. ಚಂಡಶಾಸನ ಬಂದ. ಇಬ್ಬರೂ ಆಲಿಂಗಿಸಿಕೊಂಡರು; ಮಿತ್ರರಿಬ್ಬರೂ ನಾನಾ ವಿನೋದ ಕ್ರೀಡೆಗಳಿಂದ ಕಾಲ ಕಳೆಯುತ್ತಿದ್ದರು; ಸಹಪಂಕ್ತಿ ಭೋಜನ, ಸಹವಿಳಾಸ ಕ್ರೀಡಿತಗಳಿಂದ ಸುಖಿಸುತ್ತಿದ್ದರು.

ಹೀಗಿರುವಾಗ, 'ಕಾಮದೇವನ ಕರವಾಳ'ದಂತಿದ್ದ ಸುನಂದೆ ಚಂಡಶಾಸನನ ಮನವನ್ನು ಸೂರೆಗೊಂಡಳು. ಅವಳೊಮ್ಮೆ ಉಣ ಬಡಿಸುವಾಗ ಹತ್ತಿರದಿಂದ ಅವಳ ಸೌಂದರ್ಯವನ್ನು ನೋಡಿ ಚಂಡಶಾಸನ ಹುಚ್ಚನಾದ; ಅನಂಗ ಜ್ವರದಿಂದ ಬೆಂದ. ತನ್ನ ಅವಸ್ಥೆಯನ್ನು ಸುದರ್ಶನನಿಗರುಹಿ, 'ಈ ಕಡು ಸಂಟನ ಸತಿಯ ರೂಪು ಸೋಲಿಸಿತೆನ್ನಂ" ಎಂದು ತಿಳಿಸಿದ. ಆದರೆ ಸುದರ್ಶನ ಅವನ ತಪ್ಪನ್ನು ತಿದ್ದುವುದರ ಬದಲು, ಪ್ರೋತ್ಸಾಹಿಸಿದ: "ನಿಮ್ಮ ದೊರೆ ಏಕೆ ಬಂದರು ? ಎಂದು ಪ್ರಯಾಣ ? ಎಂದು ಸುನಂದೆ ನನ್ನನ್ನು ಕೇಳಿದಳು. ಅವಳಿಗೂ ನಿನ್ನ ಮೇಲೆ ಮೋಹ ವುಂಟಾಗಿದೆ; ಅಲ್ಲದೆ, ನೀನೂ ವಸುಷೇಣನೂ ಆರೋಗಿಸಿ ಏಕಮರಾಳ ತೂಲತಲ್ಪಾಸನದಲ್ಲಿ ಪರಸ್ಪರ ಮಾತನಾಡುತ್ತಿದ್ದಾಗ, ಸುನಂದೆ ನಿನ್ನನ್ನೇ ಪ್ರೇಮದಿಂದ ನೋಡಿದಳು." ಹೀಗೆ ಸುಳ್ಳು ಹೇಳಿ ಸುದರ್ಶನ ಚಂಡ ಶಾಸನನ 'ಮನದ ಪಿಶಾಚಕ್ಕೆ ವಚನರಚನಾಧೂಪಮಂ' ತೋರಿದ: 'ನಿಮ್ಮಿಬ್ಬರನ್ನೂ ಸೇರಿಸುವ ಉಪಾಯ ಮಾಡುತ್ತೇನೆ' ಎಂದು ಭರವಸೆ ಯಿತ್ತ.

ಒಮ್ಮೆ ಬೇಟೆಯ ಮುಖ್ಯನಾಯಕ ಬಂದು, ಮೃಗಗಳ ಬೇಟೆಯನ್ನು ನೋಡಲು ಬರುವಂತೆ ದೊರೆಗೆ ಬಿನ್ನವಿಸಿದ. ದೊರೆ ಮಿತಪರಿವಾರನಾಗಿ ಚಂಡಶಾಸನನೊಡನೆ ನಡೆದು ವಿನೋದಗಳನ್ನು

ನೋಡಿದ. ಅನಂತರ ವನಕ್ಕೆ ಭೋಜನವನ್ನು ತರುವಂತೆ ಅರಸಿಗೆ ಹೇಳೆಂದು ಅರಮನೆಗೆ ದೂತನನ್ನಟ್ಟಿದ. ಬೇಟೆಯಾಡುವಾಗ ವಸುಷೇಣ ಚಂಡಶಾಸನರ ರಥಗಳು ಬೇರೆ ಬೇರೆಯಾದುವು. ಸುನಂದೆ ಬರುವ ದಾರಿಯಲ್ಲಿ ಚಂಡಶಾಸನ ಕಾದಿದ್ದು, ಪರಿಮಿತಾಂಗರಕ್ಷಕಪರೀತೆಯಾದ ಅವಳನ್ನು ಬಲಾತ್ಕಾರದಿಂದ ರಥದಲ್ಲಿ ಕುಳ್ಳಿರಿಸಿಕೊಂಡು ಮನೋವೇಗದಿಂದ ಹೊರಟ. ಆಗ ಸುನಂದೆ ದುಃಖದಿಂದ 'ಹಾ ಸುಷೇಣನೃಪ, ಹಾ ನೃಪನೀಜ' ಎಂದೊರಲಿದಳು; ಬಸಿರನ್ನು ಹೋಯಿಕೊಂಡಳು; "ಗಂಡರ ಪಿಂದೆ ಕಳ್ವುದು ಅರಿದೇ ಸ್ತ್ರೀ ಬಾಲೆಯುಂ? ಬೂತೆ, ಪಾೞ್ಮನೆಯೊಳ್ ನಾಯ್ ಘೃತಭಾಂಡಮುಂ ತೆಗೆವವೊಲ್ ಕಳ್ದುಯ್ವುದು ಅಳ್ಪಾೞಿಯೆ?"[1] ಎಂದು ಚಂಡಶಾಸನನನ್ನು ನಿಂದಿಸಿದಳು.

ಸುರಮ್ಯ ವಿಷಯದ ಗಡಿಯಲ್ಲಿದ್ದ ಸಾಮಂತ ಸಿಂಹಚೂಡ ಚಂಡಶಾಸನನ ರಥವನ್ನು ಕಂಡ; ಗಜ ಗರ್ಜಿಸಿ "ಇದಿರುಗೊಳ್ ಇಱಿಯಿಱಿ ರಥಮಂ, ಕೈದುಗೊಳ್" ಎಂದು ಚಂಡಶಾಸನನನ್ನು ತರುಬಿದ. ಚಂಡಶಾಸನ ಕತ್ತಿಯನ್ನು ಸೆಳೆದು, "ವಾನರನೇಂ ಸೆಳೆವುದೆ ಪೇರಾನೆಯ ಕೆಯ್ಯಿಡಿದ ಕರ್ಬಿನ್ ?" ಎನ್ನುತ್ತ ಎದುರಿಸಿದ. ಆಗ ಸಿಂಹಚೂಡ

ರಸೆ ಪೊಱುವುದೆ ಪರವೆಣ್ಗೆ ಅ
ೞಿಸಿದೊಡೆ[2] ? ಕಳ್ದುಯ್ದು ಕೂಡಿ ತಂದ್ಯೆ ! ಸಲ್ಲಾ
ನಸ[3]ನಾದ ಚಂಡಶಾಸನ
ಪೆಸರುಂ ಚಂಡಾಲ ನೀರೊಳಂತು ಆರ್ದುವರೇ ?

ಎಂದಾಗ, "ನೀನೆನಗೆ ಬುದ್ಧಿ ಪೇೞಲ್ ಅದೇನಪ್ಪೆ" ಎಂದು ಚಂಡಶಾಸನ ಮೂದಲಿಸಿದ. ಇಬ್ಬರಿಗೂ ಯುದ್ಧ ಕೈಗಟ್ಟಿತು. ಸುನಂದೆ, "ತಲೆಗಾಯ್ ಈ ಭಟನಂ; ಪೊಣರ್ಚಿ ಪೊಡೆವಿಕ್ಕು ಈ ದ್ರೋಹನಂ, ನೇಸಱೆ !

[1] ಪಾೞಿ=ಕ್ರಮ. ರೀತಿ [2] ಅೞಿಸು=ಬಯಸು. [3] ಸಲ್ಲಾನಸ=ಒಳ್ಳೆಯ ಮನುಷ್ಯ.

ನೆಲನೇ! ವ್ಯೋಮಮೆ! ವಾಯುದೇವ ! ಸೆಱೆಯಿಂದಂ ತಪ್ಪಿದಂದು ಎನ್ನನಾಂ ಬಲಿಗೆಯ್ವೆಂ ನಿಮಗೆ" ಎಂದು ಮೊರೆಯಿಡುತ್ತ, ಸಿಂಹಚೂಡನಿಗೆ ಜಯವನ್ನು ಹಾರೈಸುತ್ತ ಔತ್ಸುಕ್ಯಗೊಂಡಳು. ಭಯಂಕರ ಸಮರ ನಡೆಯಿತು. ಕಡೆಗೆ ಚಂಡಶಾಸನ ಸಿಂಹಚೂಡನನ್ನು ಹೊಯ್ದು ರಥವೇರಿ ಮುಹೂರ್ತಮಾತ್ರದಲ್ಲಿ ತನ್ನ ದುರ್ಗವನ್ನು ಹೊಕ್ಕ.

ಇತ್ತ ವಸುಷೇಣ, ಸುನಂದೆ ಬರುವುದೇಕೆ ತಡವಾಯಿತೆಂದು ಚಿಂತಿಸುತ್ತ ಉದ್ಯಾನಕ್ಕೆ ಬಂದು ರಥವನ್ನಿಳಿದು ಮಲ್ಲಿಕಾಮಂಟಪದ ಮುಂದೆ ನಿಂತು, "ಬಂದಳೆ ದೇವಿ ? ಪಂಕ್ತಿಗೆಡೆಮಾಡಿಸಿಪ್ಪಳೆ ? ಚಂಡ ಶಾಸನಂ ಬಂದನೆ ?" ಎಂದು ಕೇಳಿದ. ಅಷ್ಟರಲ್ಲಿ ಶೋಕಾರ್ತರಾದ ಪರಿಜನರು ನಡೆದ ಸಂಗತಿಯನ್ನು ಹೇಳಿದರು. ದೊರೆಗೆ ಕೋಪ ದುಃಖ ಗಳೆರಡೂ ಉಂಟಾಗಿ, ಮೂರ್ಛಾಗತನಾದ; ಸಚಿವರು ಎಚ್ಚರಿಸಿದರು. "ಅಹಿತ[1] ಪ್ರಾಣಾನಿಲನಿಂದ ಎನ್ನ ಕೃಪಾಣಾಹಿಯನ್[2] ಊಡಿ ಬೞಿಕಂ ಆನ್ ಉಂಡಪ್ಪೆಂ" ಎಂದು ಪ್ರತಿಜ್ಞೆ ಮಾಡಿ ವಸುಷೇಣ ಯುದ್ಧಕ್ಕೆ ಹೊರಟ; ದಾರಿಯಲ್ಲಿ ಸಿಂಹಚೂಡನ ಪಂದಲೆ ಕಾಣಸಿಕ್ಕಿತು. ನಡೆದ ಸಂಗತಿ ತಿಳಿಯಿತು. ಅಷ್ಟರಲ್ಲಿ ಸಂಜೆಯಾಗಲು, ರಾತ್ರಿಯನ್ನಲ್ಲಿಯೇ ಕಳೆದು, ಬೆಳಗಾಗುವ ಮೊದಲೆ ವಿರೋಧಿದುರ್ಗದತ್ತ ಸಾಗಿದ.

ಅತ್ತ ಚಂಡಶಾಸನನ ಪೌರರು "ಪರವೆಣ್ಣಂ ತಂದನೋ, ತಂದನೊ ಪೆಸರ್ ಕಿಡೆ ಪೆರ್ಮಾರಿಯಂ ನಮ್ಮದುರ್ಗಕ್ಕೆ ಅರಸಂ !" ಎಂದು ಚಿಂತಿಸುತ್ತ ಭಯಾಕ್ರಾಂತರಾದರು. ವಸುಷೇಣನ ಸೈನ್ಯ ಲಗ್ಗೆ ಹತ್ತಿತು. ಮೊದಲ ದಿವಸದ ಯುದ್ಧ ಮುಗಿದಮೇಲೆ, ಚಂಡಶಾಸನ ಸಿಂಗಾರಗೊಂಡು ಸುನಂದೆಯನ್ನು ಸೆರೆಯಿಟ್ಟ ಮಣಿ ಮಾಡಕ್ಕೆ ಬಂದು ವಿರಹಶೋಕಾಕುಲೆಯಾಗಿದ್ದ ಅವಳಿಗೆ ಹೀಗೆ ನುಡಿದ :

---

[1] ಅಹಿತ=ಹಗೆ. [2] ಕೃಪಾಣಾಹಿ=ಕತ್ತಿಯೆಂಬ ಸರ್ಪ.

ನಯದಿಂ ನಿನ್ನ ಒಡಂಬಡಂ ಪಡೆಯದೆ ಇಂದು ಔತ್ಸುಕ್ಯದಿಂ ತಂದ ಸ
ಲ್ಗೆಯ ನೀಂ ಮನ್ನಿಸು; ಕಾಮಿ ಕಣ್ಣಱಿಯನಲ್ತು! ಅಂ ಗಂಡುದೊಱೆತ್ತು; ಎನ್ನ ರಾ
ಣಿಯುವಾಸಂ ಪರಿಚಾರಕಾದಿ ನಿನಗೀ ಸಾಮ್ರಾಜ್ಯಲಕ್ಷ್ಮೀಸುಖೋ
ದಯದೊಳ್ ವಲ್ಲಭೆಯಾಗಿ ನೀನಿರು ದಲನ್ನೀಲಾಬ್ಜಲೋಲೇಕ್ಷಣೇ !

ಆಗ ಸುನಂದೆ ಕನಲಿ, "ಪಾಣ್ಬ, ನಿನ್ನ ತಲೆಯುಂ ಕಾರಾಗೃಹದ್ವಾರದೊಳ್ ಮೆಱೆವಾಗಳ್ ಸುಡಿ ನಾಳೆ ನೀನೆನಗೆ ಮಾಡಲ್ವೇಟ್ಪ ಸತ್ಕಾರಮಂ" ಎಂದು ಜರಿದಳು. ಅದಕ್ಕೆ ಚಂಡಶಾಸನ ಮುಳಿದು, ಈ ಆಗ್ರಹ ಬೇಡವೆಂದು ಮನವೊಲಿಸಲು ಪ್ರಯತ್ನಿಸಿದ. ಆದರೆ ಸುನಂದೆ ಜಗ್ಗಲಿಲ್ಲ; "ಮಾವಿನ ಕೊಂಬೆಯಲ್ಲಿ ನಲಿಯುವ ಕೋಗಿಲೆ ಬೇವಿನ ಕೊಂಬೆಯಲ್ಲಿ ನಲಿಯುವುದೆ?" ಎಂದು ಉತ್ತರಿಸಿ, "ವಸುಷೇಣನೃಪನೆ ಕೈವಿಡಿದ ಅಸುವಿಂಗೆ ಒಡೆಯಂ, ಚಿತಾಗ್ನಿಗೆ ಒಡೆಯಂ" ಎಂದು ದೃಢವಾಗಿ ಹೇಳಿದಳು. ಆಗ ಚಂಡಶಾಸನ ಕೋಪಗೊಂಡು, "ನಿನ್ನನ್ನು ಬಿಡುವುದಿಲ್ಲ, ನೀನು ಸತ್ತರೆ ನಾನೂ ಸಾಯುತ್ತೇನೆ. ನೀನು ಒಲಿದರೂ ಸರಿ, ಒಲಿಯದಿದ್ದರೂ ಸರಿ; ನಾನಂತೂ ನಿನಗೆ ಎರಡಿಲ್ಲದೆ ಒಲಿದಿದ್ದೇನೆ; ಬೇರೆ ಬೇಟಕ್ಕೆ ಬಾಯಿ ಬಿಡಲಾರೆ. ನೀನು ನನ್ನ ಮನೆಯಲ್ಲಿದ್ದೀಯೆ ಎಂಬ ಆಸೆಯಷ್ಟೇ ನನಗೆ ಸಾಕು. ರಣದಲ್ಲಿ ಆದುದಾಗಲಿ'! ಎಂದು ನುಡಿದು ಹೋದ.

ಬೆಳಗಾಯಿತು. ಚಂಡಶಾಸನ ಒಂದು ಕೈತವವನ್ನು ನೆನೆದು ಇಂದ್ರಜಾಲಿಗನಿಂದ ವಸುಷೇಣನ ಶಿರವನ್ನು ಮಾಡಿಸಿ, ಅವನು ಮಡಿದನೆಂದು ಆ ಮಾಯಾಶಿರವನ್ನು ತಂದು ಸುನಂದೆಯ ಮುಂದೆ ಈಡಾಡಿಸಿದ. ಅದನ್ನು ಕಂಡೊಡನೆಯೇ, 'ಹೃದಯದೊಳಿರ್ದ ವಲ್ಲಭನಸಾಕ್ಷಣ ಭೀತಿಯಿಂ ಈಕ್ಷಿಪಂತೆ' ಅವಳ ಕಣ್ಣುಮುಚ್ಚಿದುವು, ಪ್ರಾಣಹೋಯಿತು. ಚಂಡಶಾಸನ ದುಃಖಿತನಾಗಿ, "ಕೂಡುವೆಂ ಬೆರಗಿಂದ ಎಂದು ಇದಂ ಇಂತು ಮಾಡೆ ಮರಣಂ ಮೂಡಿತ್ತು ಹೋ ಬೆಂದೆನಾನ್" ಎಂದು ವಿಲಪಿಸುತ್ತ ಸುನಂದೆಯ ದೇಹವನ್ನಪ್ಪಿಕೊಂಡು ಮೂರ್ಛಿತನಾದ.

ಎಚ್ಚತ್ತು ಸುಯ್ದು ಬಿದೆಬಿದೆ ಬೆಂದು, "ಮಱುಮೆಯ್ಯೊ[1]ಳಾದೊಡಂ ಕೂಡದೆ ಮಾಣೆನ್ ಅಬ್ಜದಳಲೋಚನೆ ನಿನ್ನೊಡನೆ" ಎಂದು ನಿರ್ಧರಿಸಿ, ಅವಳೊಡನೆ ತಾನೂ ಏಕಾಸನದಲ್ಲಿ ಕುಳಿತು ಚಿತಾಗ್ನಿಯನ್ನು ಹೊಗುವುದಾಗಿ ತಿಳಿಸಿದ. ಇದನ್ನರಿತ ಅಂತಃಪುರ ಸ್ತ್ರೀಯರು. "ಮಾವಿಂಗೆ ಮಲ್ಲಿಗೆಗಳ್ ಕೂರ್ತೊಡೆ[2] ಮಾವು ಕೂರ್ತುದು ವಸಂತಶ್ರೀಗೆ" ಎಂದು ಮಾತನಾಡಿಕೊಂಡು, ಪ್ರಾಣೇಶ್ವರನೊಡನೆ ತಾವೂ ಸಾಯುವುದಾಗಿ ನಿಶ್ಚಯಿಸಿದರು; ಚಂಡಶಾಸನನೊಡನೆ ಸಹಗಮನ ಮಾಡಿದರು. ಆಗ ಆ ಪುರ 'ಕರುಣಾದ್ಭುತರೌದ್ರರಸಾಕರಂ' ಎನ್ನುವಂತಾಯಿತು.

ವಸುಷೇಣ ಲಗ್ನಗೆ ಸಿದ್ಧತೆ ಮಾಡುತ್ತಿರುವಷ್ಟರಲ್ಲಿ ಚರನೊಬ್ಬ ಬಂದು ಈ ಸುದ್ದಿ ತಿಳಿಸಿದ. ವಸುಷೇಣ ಶೋಕಗ್ರಸ್ತನಾಗಿ,

ಆನ್ ಅಟಿದೆನೆಂದು ಪುಸಿದೊಡೆ
ಮಾನಿನಿ ನೀಂ ಕಟಿದೆ; ನಿನ್ನ ಸಾವನೆ ಕಂಡು ಇಂ
ತಾನುಟಿದೇಂ ? ನಿರ್ಲಜ್ಜರ್,
ದೀನರ್ ಕೃಪಣರ್ ಕೃತಘ್ನರ್ ಆರ್ ಎನ್ನಿಂದಂ ?

ಎಂದು ಹಲುಬಿದ. ಇನಿಯಳು ಮಡಿದಮೇಲೆ ರಾಜ್ಯವೈಭವವೇಕೆ, ಈ ಪ್ರಾಣದ ಹಂಗೇಕೆ ಎಂದು ಚಿಂತಿಸಿ, ಲಗ್ನವನ್ನು ತೆಗೆಯಿಸಿ, ನಿರ್ವೇಗಪರನಾಗಿ ತನ್ನ ರಾಜ್ಯಕ್ಕೆ ಹಿಂದಿರುಗಿದ.

## ಕವಿಯ ಕೌಶಲ

ಈ ಚಂಡಶಾಸನನ ಕಥೆ 'ಅನಂತನಾಥ ಪುರಾಣ'ದ ಹೃದಯಸ್ಥಾನ; ರಸದೂಟೆ. "ಅನಂತನಾಥ ಪುರಾಣದ ಮಹಾರಣ್ಯದಲ್ಲಿ ಇದೊಂದು ಚೆಲುವಿನ ಕೊಳ್ಳ" ಎನಿಸಿಕೊಂಡಿದೆ. 'ಉತ್ತರಪುರಾಣ'ದಲ್ಲಿ ಇದು ಬಿಂದುರೂಪವಾಗಿ ಹೀಗೆ ಬರುತ್ತದೆ:

---

[1] ಮಱು ಮೆಯ್=ಇನ್ನೊಂದು ಜನ್ಮ. [2] ಕೂರ್=ಪ್ರೀತಿಸು.

ಏತಸ್ಮಿನ್ ಭಾರತೇ ವರ್ಷೇ ಪೌದನಾಧಿಪತಿರ್ನೃಪಃ
ಸುಷೇಣೋ ಮಹಾದೇವೀ ತಸ್ಯ ನಂದೇತ್ಯನಿಂದಿತಾ
ಮಲಯಾಧೀಶ್ವರೋ ನಾಮ್ನಾ ಕದಾಚಿಚ್ಚಂಡಶಾಸನಃ
ಆಜಗಾಮ ನೃಪಂ ದ್ರಷ್ಟುಂ ತತ್ಪುರಂ ಮಿತ್ರತಾಂ ಗತಃ
ನಂದಾ ಸಂದರ್ಶನೇನಾಸೌ ಮೋಹಿತಃ ಪಾಪಪಾಕವಾನ್
ಅಹೃತ್ಯ ತಾಮುಪಾಯೇನ ಸ್ವದೇಶಮಗಮತ್ಕುಧೀಃ*

ಇಷ್ಟು ಸೂಚನೆಯು ಹೊರತು ಮತ್ತಾವ ಮೂಲವೂ ಜನ್ನನಿಗೆ ಇದ್ದಂತೆ ಕಾಣುವುದಿಲ್ಲ. 'ಚಾವುಂಡರಾಯಪುರಾಣ'ದಲ್ಲಿರತಕ್ಕದ್ದೂ ಇಷ್ಟೇ ಅಂಶ. ಈ ಒಂದೆರಡು ಎಳೆಗಳನ್ನು ಹಿಡಿದುಕೊಂಡು ಜನ್ನ ಕಲಾತ್ಮಕವಾದ ವಸ್ತ್ರವೊಂದನ್ನು ನೆಯ್ದಿರುವುದು ಅವನ ಕೌಶಲಕ್ಕೆ ಹೆಗ್ಗುರುತು. ರಾಮಾಯಣದ ಕಥೆಯಿಂದ ಕವಿ ಪ್ರಭಾವಿತನಾಗಿರುವುದು ಸ್ಪಷ್ಟ; ಆದರೆ ಅವನು ಕಥೆಗೆ ಕಡೆಯಲ್ಲಿ ಕೊಟ್ಟಿರುವ ತಿರುವು ಮತ್ತು ಸಾಧಿಸಿದ ಪರಿಣಾಮ ರಮಣೀಯತೆ ಅಸ್ವಾದೃಶವಾದವು.

ಚಂಡಶಾಸನ ಪ್ರಸಂಗದಲ್ಲಿ ಮತ್ತೆ ನಾವು 'ಯಶೋಧರಚರಿತೆ'ಯ ಸತ್ವ, ಶೈಲಿಗಳನ್ನು ಕಾಣುತ್ತೇವೆ. ಎರಡು ಕಡೆಗಳಲ್ಲೂ ಪ್ರಣಯ ಸಮಸ್ಯೆಯ ಸ್ವರೂಪ ಕೂಡ ಸ್ಥೂಲವಾಗಿ ಒಂದೇ ಎನ್ನಬಹುದು; ಆದರೆ ಸೂಕ್ಷ್ಮ ವ್ಯತ್ಯಾಸಗಳುಂಟು. ಒಟ್ಟಿನಲ್ಲಿ, 'ಯಶೋಧರಚರಿತೆ'ಯಲ್ಲಿ ಚಿತ್ರಿತವಾದ ಪ್ರಣಯ ಸಮಸ್ಯೆಯ ಮತ್ತೊಂದು ಮುಖವನ್ನು ಚಂಡಶಾಸನ ಕಥೆಯಲ್ಲಿ ಕವಿ ಚಿತ್ರಿಸಿದ್ದಾನೆ; ಅದಕ್ಕೆ ಇದು ಪೂರಕವಾಗುತ್ತದೆ. ವಿಷಮ ಪ್ರಣಯದ ಭೀಷಣದುರಂತ ಚಿತ್ರವನ್ನು ಇಲ್ಲಿ ಇನ್ನೊಂದು ಬಗೆಯಾಗಿ

---

* "ಪೌದನಾಧಿಪತಿ ಸುಷೇಣ, ನಂದಾ ಎಂಬ ಅನಿಂದಿತೆ ಅವನ ಮಹಾದೇವಿ. ಮಿತ್ರನಾದ ಮಲಯಾಧೀಶ್ವರ ಚಂಡಶಾಸನ ಒಮ್ಮೆ ಅವನನ್ನು ನೋಡಲು ಬಂದ. ನಂದೆಯ ಸಂದರ್ಶನದಿಂದ ಮೋಹಿತನಾದ ಆ ಪಾಪಿ, ಕುಮತಿ ಉಪಾಯದಿಂದ ಅವಳನ್ನಪಹರಿಸಿಕೊಂಡು ತನ್ನ ರಾಜ್ಯಕ್ಕೆ ಹೋದ."

ಕವಿ ಬಿಡಿಸಿದ್ದಾನೆ. ಅಲ್ಲಿ ಅಮೃತಮತಿ ತನ್ನ ಗಂಡನಿಗೆ ದ್ರೋಹಬಗೆದು ಬೇರೊಬ್ಬನನ್ನು ಪ್ರೇಮಿಸಿದಳು: ಇಲ್ಲಿ ಚಂಡಶಾಸನ ತನ್ನ ಮಿತ್ರನಿಗೆ ದ್ರೋಹವೆಸಗಿ ಅವನ ಪತಿವ್ರತೆ ಹೆಂಡತಿಯಲ್ಲಿ ಮೋಹಗೊಳ್ಳುತ್ತಾನೆ. ಅದರಂತೆಯೇ ಇದೂ ಧರ್ಮಬಾಹಿರ ಪ್ರಣಯ ವೈಚಿತ್ರ್ಯ. ಆದರೆ ಇಲ್ಲಿನ ದುರಂತ ಹೆಚ್ಚಿನದು. ಚಂಡಶಾಸನನ ವರ್ತನೆಯನ್ನು ನಾವು ಅರ್ಥ ಮಾಡಿಕೊಳ್ಳುವುದೂ ಸುಲಭ; ಅದು ಕಲುಷಿತವಾದರೂ ಅಸಹಜ ವೆನಿಸುವುದಿಲ್ಲ.

ಮಿತ್ರ ಸಂದರ್ಶನಾರ್ಥವಾಗಿ ಬಂದ ಚಂಡಶಾಸನನ ಕಣ್ಮನ ಗಳನ್ನು ಸುನಂದೆಯ ಅನುಪಮ ಸೌಂದರ್ಯ ಸೆಳೆಯುತ್ತದೆ; ಅವನು ಅವಳಲ್ಲಿ ದುರ್ನಿವಾರವಾಗಿ ಆಸಕ್ತನಾಗಿ ಅವಳನ್ನು ಕರೆದೊಯ್ಯುತ್ತಾನೆ. ತಾನು ಮಾಡುತ್ತಿರುವುದು ಪಾಪವೆಂಬ ಯೋಚನೆಯೇ ಅವನಿಗೆ ಬರುವುದಿಲ್ಲ. ಅವನಿಗೆ ಇದೇನೂ ಮೊದಲ ಬೇಟವಲ್ಲ; ಮನೆಯಲ್ಲಿ ಹಲವರು ಹೆಂಡಿರಿದ್ದಾರೆ. ಅಂಥದ್ದರಲ್ಲೂ ಅವನ ಕಣ್ಣು ಸುನಂದೆಯ ಮೇಲೆ ಬೀಳುತ್ತದೆ. ಅವನ ಈ ವಿಷಯಲಂಪಟತೆ ಮತ್ತು ಅದರಿಂದ ಅವನು ಮಾಡಿದ ಅಪರಾಧ ಅಕ್ಷಮ್ಯವೇ ಸರಿ; ಯಾರೂ ಅದನ್ನು ಸಮರ್ಥಿಸುವಂತಿಲ್ಲ. ಆದರೆ ಅವನ ತಪ್ಪಿನಲ್ಲೂ ಮೆಚ್ಚುವಂತಹ ಕೆಲವಂಶಗಳನ್ನು ನಾವು ಮುಂದೆ ಕಂಡುಕೊಳ್ಳುವಂತಾಗುತ್ತದೆ.

ಸುನಂದೆಯನ್ನು ವಶಪಡಿಸಿಕೊಳ್ಳುವ ಅಥವಾ ಅಪಹರಿಸುವ ಉದ್ದೇಶವನ್ನಿಟ್ಟುಕೊಂಡು ಅವನು ಅತಿಥಿಯಾಗಿ ಬಂದವನಲ್ಲ. ಬಂದನಂತರ, ಸುನಂದೆ ಕಾಮನ ಕೂರ್ಗಣೆಯಾಗಿ ಅವನ ಹೃದಯ ವನ್ನಿರಿಯುತ್ತಾಳೆ. ಅವನ ಗೆಳೆಯ ಸುದರ್ಶನನಾದರೂ ವಿವೇಕವನ್ನು ಹೇಳಿದ್ದರೆ, ಚಂಡಶಾಸನನ ಮನದ ವಿಕಾರ ಕಳೆಯುತ್ತಿತ್ತೇನೊ. ಬದಲಾಗಿ ಅವನು ಹುಸಿಯಾಡಿ ದೊರೆಯ ಮರುಳನ್ನು ಇನ್ನಷ್ಟು ಕೆರಳಿಸುತ್ತಾನೆ. ಸಂಯಮಗೆಟ್ಟು ಚಂಡಶಾಸನ ಸುನಂದೆಯನ್ನು ಕೊಂಡೊಯ್ಯುತ್ತಾನಷ್ಟೆ.

ಆದರೆ ಅವಳನ್ನು ನಯದಿಂದ ಒಲಿಸಿಕೊಳ್ಳಲು ಪ್ರಯತ್ನ ಮಾಡು ತ್ತಾನೆಯೇ ಹೊರತು ಬಲಾತ್ಕಾರಪಡಿಸುವುದಿಲ್ಲ. ಅಷ್ಟರಮಟ್ಟಿಗಾದರೂ ಅವನ ಸಂಸ್ಕಾರವನ್ನು ಮೆಚ್ಚಬೇಕು. "ನಾನು ನಿನ್ನ ಗಂಡುತೊತ್ತು" ಎಂದು ಅವಳೆದುರು ಅವನು ಶರಣಾಗುವುದನ್ನು ನೋಡಿದಾಗ, ನಮ್ಮ ಮನಸ್ಸು ಮರುಗುತ್ತದೆ. ಅವಳು ಕನಲಿ ಜರಿದಾಗ, "ನಾನು ನಿನಗೆ ಎರಡಿಲ್ಲದೆ ಒಲಿದಿದ್ದೇನೆ. ಬೇರಾವ ಬೇಟಕ್ಕೂ ಬಾಯ್ಬಿಡಲಾರೆ. ನೀನು ನನ್ನ ಮನೆಯಲ್ಲಿರುವೆಯೆಂಬ ಆಸೆಯೇ ಸಾಕು" ಎಂದು ನುಡಿಯುತ್ತಾನೆ. ಅವನ ವ್ಯಾಮೋಹದ ಈ ಉತ್ಕಟತೆ ನಮ್ಮನ್ನು ವಿಸ್ಮಯಗೊಳಿಸುತ್ತದೆ. ಅಲ್ಲಿ ಅಮೃತಮತಿ, "ಉಳಿದ ಗಂಡಸರೆಲ್ಲ ನನ್ನ ಸೋದರರು" ಎಂದು ಅಷ್ಟವಂಕನಿಗೆ ನಂಬುಗೆ ಕೊಟ್ಟರೆ, ಇಲ್ಲಿ ಚಂಡಶಾಸನ "ಬೇಜಾರ ಬೇಟಕ್ಕೆ ಬಾಯ್‌ಬಿಡಲಾಜೆಂ" ಎಂದು ಆಶ್ವಾಸನೆ ಕೊಡುತ್ತಿದ್ದಾನೆ. ಈ ವಿಚಿತ್ರ ನಿಷ್ಠೆಗೆ ನಾವು ತಲೆದೂಗಬೇಕಲ್ಲವೇ ? "ನೀನು ನನ್ನ ಮನೆಯಲ್ಲಿದ್ದರೆ ಸಾಕು" ಎನ್ನುವ ನುಡಿಯಂತೂ ಚಂಡಶಾಸನನ ನಿಷ್ಕಪಟ ಪ್ರೇಮಕ್ಕೆ ಉಜ್ವಲ ಸಾಕ್ಷಿ. ರಾವಣನೂ ಕೂಡ ಇಂತಹ ಮಾತನ್ನಾಡಲಿಲ್ಲ.

ಚಂಡಶಾಸನನ ಈ ಮಾತುಗಳೆಲ್ಲ ಬರಿಯ ಉಪಾಯ ವೆನ್ನಬಹುದಿತ್ತು. ಆದರೆ ಅವನು ಸಹಗಮನ ಮಾಡಿ ತನ್ನ ಅನುರಾಗದ ಪರಾಕಾಷ್ಠೆಯನ್ನು ತೋರಿಸಿಕೊಡುತ್ತಾನೆ. ಹೆಣ್ಣು ಗಂಡಿನೊಡನೆ ಸಹಗಮನ ಮಾಡಿದ ನಿದರ್ಶನಗಳು ಚರಿತ್ರೆಯಲ್ಲಿ ಹೇರಳವಾಗಿವೆ. ಆದರೆ ಗಂಡು ಹೆಣ್ಣಿನೊಡನೆ, ಅದರಲ್ಲೂ ತನಗೊಲಿಯದ ಬೇರೊಬ್ಬನ ಮಡದಿಯೊಡನೆ, ಸಹಗಮನ ಮಾಡಿದ್ದು ಪ್ರಾಯಶಃ ಇಲ್ಲಿ ಮಾತ್ರ. ಚಂಡಶಾಸನನ ಸಹಗಮನ ಅವನ ಪಾಲಿಗೆ ಸುಖವಾಯಿತು, ಧರ್ಮದ ದೃಷ್ಟಿಯಿಂದ ಶಿಕ್ಷೆಯಾಯಿತು, ನಮ್ಮ ದೃಷ್ಟಿಯಿಂದ ಒಲವಿನ ಒರೆಗಲ್ಲಾಯಿತು; ಅಗ್ನಿಪ್ರವೇಶದಿಂದ ಅವನು ಶುದ್ಧನೇ ಆದ. ಅವನ

ದೌರ್ಬಲ್ಯವೇ ಶಕ್ತಿಯಾಗಿ ಪರಿಣಮಿಸಿತಲ್ಲವೇ? (ತನ್ನ ಚಿತಾಗ್ನಿಯ ಒಡೆತನದ ಬಗ್ಗೆ ಸುನಂದೆಯಾಡಿದ ಮಾತು ಅವನ ಸಹಗಮನದಿಂದ ಒಂದು ರೀತಿಯಲ್ಲಿ ಸುಳ್ಳಾಯಿತು; ಸುನಂದೆ ಅದನ್ನು ತಪ್ಪಿಸಲಾರ ದಾದಳು!)

ಇನ್ನು ಸುನಂದೆ ಎಂತಹ ಹೆಣ್ಣು ! " ವಸುಷೇಣನೇ ನನ್ನ ಪ್ರಾಣಕ್ಕೆ ಒಡೆಯ, ಅವನೇ ನನ್ನ ಚಿತಾಗ್ನಿಗೂ ಒಡೆಯ"ನೆಂದು ನಂಬಿ, ಅವನ ಮಾಯಾಶಿರವನ್ನು ಕಂಡೊಡನೆಯೇ ಗತಾಸುವಾದ ಪತಿವ್ರತೆ; ಭಾರತೀಯ ನಾರಿಯ ಪರಮಾದರ್ಶ. "ಪಾತಿವ್ರತ್ಯದ ಅಚಲಸ್ತಂಭವನ್ನು ಬಿಗಿ ಹಿಡಿದು, ಅದರಲ್ಲಿ ಪ್ರಾಣವೊಪ್ಪಿಸುವ ಸುನಂದೆ; ಅಲಭ್ಯಳಾದ ಅವಳನ್ನು ಬಯಸಿ... ಬಳಿಕ ತನ್ನ ಕಲುಷಿತ ಪ್ರಣಯದ ಸತ್ತ್ವದಿಂದಲೇ ಪಾಠಕರ ಅನುಕಂಪವನ್ನು ಗಳಿಸುವ ಚಂಡಶಾಸನ—ಇವರಿಬ್ಬರೂ ಕನ್ನಡ ಸಾಹಿತ್ಯ ದಲ್ಲಿ ಚಿರಂಜೀವಿಗಳು."

'ಯಶೋಧರಚರಿತೆ'ಯನ್ನು ಜನ್ನ ಬರೆಯುವಾಗ, ವಿವರ ವಿವರದಲ್ಲೂ ವಾದಿರಾಜನ ಕಾವ್ಯ ಅವನ ಕಣ್ಣ ಮುಂದಿತ್ತು. ಆದರೆ ಚಂಡಶಾಸನೋಪಾಖ್ಯಾನ ಕವಿಯ ಸ್ವಶಕ್ತಿಯಿಂದ ವಿಕಾಸಗೊಳ್ಳ ಬೇಕಾಯಿತು. ಅವನ ನಿಜವಾದ ಪ್ರತಿಭೆ ಇಲ್ಲಿ ನಮಗೆ ಚೆನ್ನಾಗಿ ಗೋಚರಿಸುತ್ತದೆ. ಸನ್ನಿವೇಶರಚನೆಯಲ್ಲಿ ಮತ್ತು ಪಾತ್ರನಿರ್ಮಿತಿಯಲ್ಲಿ ಮಿಗಿಲಾದ ಜಾಣ್ಮೆಯನ್ನು ಕವಿ ತೋರಿದ್ದಾನೆ. ಸುಮಾರು ೮೦ ಪದ್ಯ ಗಳಷ್ಟು ಚಿಕ್ಕದಾದರೂ ಈ ಉಪಾಖ್ಯಾನ ಸಹೃದಯರ ಮೇಲೆ ಮಹತ್ತರ ಪ್ರಭಾವ ಬೀರುತ್ತದೆ. ಕಥೆಗೆ ಅನಗತ್ಯವಾದ ವರ್ಣನೆಗಳಿಲ್ಲ; ಶೈಲಿಯಲ್ಲಿ ಸಂಸ್ಕೃತ ಕನ್ನಡಗಳ ಮೈತ್ರಿಯಿದೆ. ರಸ ಧ್ವನಿಗಳು ಉದ್ದಕ್ಕೂ ವ್ಯಕ್ತವಾಗಿವೆ. ಈ ಕಡು ನಂಟನ ಸತಿಯ ರೂಪು ಸೋಲಿಸಿತೆನ್ನಂ, ತಲೆ ಹೋಗಿಯುಂ ಬಸಿದು ಬೀಟಿದೆ ಸ್ವೈರಿಸರಲ್ತೆ ಕಾಮುಕರ್, ಈ ನೋವೆ ಸಾವಲ್ಲವೇ,

ಚಂಡಶಾಸನವೆಸರಂ ಚಂಡಾಲ ನೀರೊಳಿಂತರ್ದುರ್ವರೇ, ಪಾತಿವ್ರತ್ಯದ ಮಿಸುಗುವ ಜಸವೆಣ್ಣ ತಲೆಗೆ ತರ್ಪನೆ ಪುಲ್ಲಂ, ಮಾವಿಂಗೆ ಮಲ್ಲಿಗೆಗಳ್ ಕೂರ್ತೊಡೆ ಮಾವು ಕೂರ್ತುದು ವಸಂತಶ್ರೀಗೆ–ಮುಂತಾದೆಡೆಗಳಲ್ಲಿ ಹೊಮ್ಮಿರುವ ದೇಸಿಯ ಸೊಬಗು ಮತ್ತು ಅರ್ಥಸ್ವಾರಸ್ಯ ಗಮನಾರ್ಹವಾಗಿದೆ.

ಸುನಂದೆ ಅಪಹೃತಳಾದಮೇಲೆ ಸಖೀಜನರು ಮಾಡಿದ ಆರ್ತನಾದವನ್ನು ಕವಿ ಹೃದಯವಿದ್ರಾವಕವಾಗುವಂತೆ ಬಣ್ಣಿಸಿದ್ದಾನೆ:

ಹಾ ಲಲಿತಾಂಗಿ! ಹಾ ಕುಸುಮಕೋಮಳೆ! ಹಾ ಕಳಹಂಸಯಾನೆ ! ಹಾ
ನೀಲಸರೋಜಲೋಚನೆ ! ಸುನಂದೆ ! ನೃಪೇಂದ್ರನ ರಾಜ್ಯಲಕ್ಷ್ಮಿ ! ಭೂ
ಪಾಲನ ಭಾಗ್ಯಲಕ್ಷ್ಮಿ ! ವಸುಷೇಣನ ಮಂಗಳಲಕ್ಷ್ಮಿ ! ರಾಜಹಂ
ಡಾಲನ ಬಾಹುರಾಹುಗಿಳನಂ[1]ನಿನಗೆ ಎತ್ತಣಿಂ ಎತ್ತ ಬಂದುದೋ !

ಚಂಡಶಾಸನನ ಹೆಂಡಿರು ಪತಿಯೊಡನೆ ಸಹಗಮಿಸಲು ನಿರ್ಧರಿಸಿ, ತಮಗೆ ಪ್ರಿಯವಾಗಿದ್ದ ತರುಲತೆಗಳನ್ನು ಬೀಳ್ಕೊಳ್ಳುವ ಸನ್ನಿವೇಶ ನಿಜವಾಗಿಯೂ ರಸಾರ್ದ್ರವಾಗಿದೆ:

ಪ್ರಮದ ವನಂಗಳೊಳ್ ತರುಲತಾವಳಿಗೆ, ಅಂಚೆಗೆ, ಕೋಕಿಳಕ್ಕೆ, ವಿ
ಭ್ರಮಿಸುವ ತಣ್ಪುಳಿಲ್ಗೆ[2], ಕೃತಕಾದ್ರಿಗೆ, ಕೋಡುವ[3]ಪೂಗೊಳಕ್ಕೆ, ತ
ದ್ರಮಣಿಯರ್ ಅಪ್ಪಿ, ಕೈಮುಗಿವ, ಕೈಲಿಡೆಮಾಡುವ, ಪೊಲ್ಲಕೆಯ್ವುದಂ
ಕ್ಷಮಿಯಿಸಿಯೆಂಬ, ಬೀಳ್ಕೊಡುವ, ಕೊಳ್ಳರವೋತ್ಕಟಂ ಆಯ್ತು ಸಂಕಟಂ !

ಪ್ರಕೃತಿಯನ್ನು ಇಷ್ಟೊಂದು ಆತ್ಮೀಯತೆಯಿಂದ ಕಂಡ ಕವಿಗಳು ಕನ್ನಡದಲ್ಲಿ ಬಹಳ ಮಂದಿಯಿಲ್ಲ.

---

[1] ಗಿಳನ=ನುಂಗುವಿಕೆ. [2] ಪುಳಿಲ್=ಮರಳು [3] ಕೋಡುವ=ತಂಪಾದ

# ೫. ಸಮಾಪ್ತಿ

ಜನ್ನನ 'ಯಶೋಧರ ಚರಿತೆ' ಮತ್ತು 'ಅನಂತನಾಥಪುರಾಣ'ದಲ್ಲಿ ಬರುವ ಚಂಡಶಾಸನ ಕಥೆ—ಇವು ಕನ್ನಡ ವಾಙ್ಮಯದಲ್ಲಿ ವಿಶಿಷ್ಟ ಕೃತಿಗಳು. ಕವಿ ಸಾಂಪ್ರದಾಯಿಕವಾದ ಮತ್ತು ಚಿರಪರಿಚಿತವಾದ ವಸ್ತುವನ್ನು ಬಿಟ್ಟು, ಅಪಾತ್ರ ಪ್ರಣಯದ ಎರಡು ದಿಕ್ಕುಗಳನ್ನು ನಿರೂಪಿಸಿ ಬದುಕಿನ ವಾಸ್ತವಿಕತೆಗೆ ಕನ್ನಡಿ ಹಿಡಿದಿದ್ದಾನೆ. ಅವನ ಪಾತ್ರಗಳು ಪೌರಾಣಿಕ ಅಥವಾ ಐತಿಹಾಸಿಕ ಎನಿಸಬಹುದು; ಆದರೆ ಅವುಗಳಲ್ಲಿರುವ ಸಮಸ್ಯೆ ಮಾತ್ರ ಸಾಮಾಜಿಕವಾದುದು, ನಿತ್ಯನೂತನವಾದುದು. "ಮಾವಿಂಗೆ ಮಲ್ಲಿಗೆಗಳ್ ಕೂರ್ತೊಡೆ ಮಾವು ಕೂರ್ತುದು ವಸಂತ ಶ್ರೀಗೆ" ಎಂಬ ಸಮಸ್ಯೆಯನ್ನು ಕವಿ ಪ್ರದರ್ಶಿಸಿ, "ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ?" ಎಂಬ ವಿವರಣೆ ನೀಡಿದ್ದಾನೆ; "ಕ್ರಾಂತಿಕಾರಕ ರೀತಿಯಲ್ಲಿ ಅದಮ್ಯವಾದ ಕಾಮದ, ಧರ್ಮವಿರುದ್ಧ ಪ್ರಣಯದ ಸ್ತ್ರೀಮುಖ ಪುರುಷಮುಖಗಳನ್ನು ಉಜ್ವಲವಾಗಿ ಚಿತ್ರಿಸಿ ಕನ್ನಡ ಸಾಹಿತ್ಯಕ್ಕೆ ಸ್ವಂತ ಕಾಣಿಕೆ ಸಲ್ಲಿಸಿದ್ದಾನೆ." ಕನ್ನಡ ಸಾಹಿತ್ಯಕ್ಕೆ ಮಾತ್ರವಲ್ಲ, ಜಾಗತಿಕ ಸಾಹಿತ್ಯಕ್ಕೂ ಬೆಲೆಯುಳ್ಳ ಕಾಣಿಕೆ ಸಲ್ಲಿಸಿದ್ದಾನೆಂದರೆ ತಪ್ಪಲ್ಲ. ಮಹಾ ಕಾವ್ಯದ ಔನ್ನತ್ಯ, ಭವ್ಯತೆಗಳು ಆಂಶಿಕವಾಗಿಯಾದರೂ ಈ ಕಿರುಗಬ್ಬ ಗಳಲ್ಲಿ ತಲೆದೋರಿವೆಯೆಂದೊಪ್ಪಬೇಕು. ಆದ್ದರಿಂದ, ಜನ್ನ ಮಹಾಕವಿಗಳ ಸಾಲಿನಲ್ಲಿ ನಿಲ್ಲಲಾರನಾದರೂ ಮಧ್ಯಮವರ್ಗದ ಕವಿಗಳ ಪಂಕ್ತಿಯಲ್ಲಿ ಅಗ್ರಸ್ಥಾನಕ್ಕೆ ನಿಸ್ಸಂದೇಹವಾಗಿ ಅರ್ಹನಾಗುತ್ತಾನೆ. "ನೇಮಿಜನ್ನಮರ್ ಇರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್" ಎಂಬ ಮಧುರನ ಪ್ರಶಂಸೆ ಉತ್ಪ್ರೇಕ್ಷೆಯಾದರೂ, ಭಾಗಶಃ ಸತ್ಯವಾಗುತ್ತದೆ.

## ಉಪಯುಕ್ತ ಗ್ರಂಥಗಳು ಮತ್ತು ಲೇಖನಗಳು


1. Vadiraja's Yasodhara Charita... (Ed.) Dr. K. Krishna Moorthy.
2. ಜನ್ನನ ಯಶೋಧರ ಚರಿತೆ (ಸಂ.) ಕ. ವೆಂ. ರಾಘವಾಚಾರ್
3. ಜನ್ನನ ಅನಂತನಾಥ ಪುರಾಣ (ಸಂ.) ಎಚ್.ಆರ್. ರಂಗಸ್ವಾಮಿ ಅಯ್ಯಂಗಾರ್, ಡಿ. ಶ್ರೀನಿವಾಸಾಚಾರ್ಯ
4. ಕರ್ಣಾಟಕ ಕವಿಚರಿತೆ ಆರ್. ನರಸಿಂಹಾಚಾರ್ಯ
5. ಕನ್ನಡ ಸಾಹಿತ್ಯ ಚರಿತ್ರೆ ರಂ.ಶ್ರೀ. ಮುಗಳಿ
6. ಕಾವ್ಯಸಮೀಕ್ಷೆ ತೀ.ನಂ. ಶ್ರೀಕಂಠಯ್ಯ
7. ಯಶೋಧರ ಚರಿತೆಯಲ್ಲಿ ಕಾಮವಿಕಾರ ನಿರೂಪಣೆಯ ಉದ್ದೇಶ (ದ್ರೌಪದಿಯ ಶ್ರೀಮುಡಿ) ಕುವೆಂಪು
8. ಜನ್ನನೂ, ವಾದಿರಾಜನೂ (ಪೀಠಿಕೆಗಳು ಲೇಖನಗಳು) ಡಿ.ಎಲ್. ನರಸಿಂಹಾಚಾರ್
9. ಜನ್ನನ ಅಮೃತಮತಿ ('ಕಾವ್ಯ ವ್ಯಾಸಂಗ') ಎಲ್.ಆರ್. ಹೆಗಡೆ
10. ಕನ್ನಡ ಯಶೋಧರ ಚರಿತ ಸಿ.ಪಿ.ಕೆ.


ಕೆ.ಸಂ. ೬೯೯೬-ಮೈವಿವಿಮು-೫೦೦೦ ಪ್ರತಿಗಳು-೨೩.೭.೨೦೦೧

೩೦. ಕಾಳಿದಾಸನ ನಾಟಕಗಳು – ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ – ಡಾ. ಟಿ. ಜಿ. ಸಿದ್ದಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ – ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ – ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ – ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ – ಜಿ. ಬ್ರಹ್ಮಪ್ಪ
೩೬. ಮಾಘಕವಿ – ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ – ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ – ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ – ರಾಮೇಗೌಡ
೪೦. ಮೂರನೆಯ ಮಂಗರಸ ಕವಿ – ಹಂಪ ನಾಗರಾಜಯ್ಯ
೪೧. ನಾಗಚಂದ್ರ – ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ – ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ – ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ – ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ – ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ – ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ – ಡಾ. ಹಿರಣ್ಮಯ
೪೮. ವಿದ್ಯಾಪತಿ – ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ – ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ – ಗುರುಪಾದ ಕೆ. ಹೆಗಡೆ
೫೧. ಪೊನ್ನ – ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ – ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ – ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ – ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ – ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು – ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ – ಶಾಲಿನಿ ರಘುನಾಥ
೫೮. ಭಾರತೀಯ ಮಹಿಳಾ ಪರಂಪರೆ – ಬಿ. ಪಿ. ಚಂದ್ರಾಬಾಯಿ
೫೯. ಬಂಧುವರ್ಮ – ಬಿ. ಎಸ್. ಸಣ್ಣಯ್ಯ
೬೦. ಶ್ರೀರಾಮಾಯಣದರ್ಶನಂ – ಒಂದು ಸಮೀಕ್ಷೆ – ಡಾ. ಸಿ. ಪಿ. ಕೃಷ್ಣಕುಮಾರ್

೬೧. ದುರ್ಗಸಿಂಹ – ರಾಮೇಗೌಡ

೬೨. ಪಾಲ್ಕುರಿಕೆ ಸೋಮನಾಥ – ಡಾ. ಆರ್ವಿಯಸ್ ಸುಂದರಂ

೬೩. ಕನ್ನಡ ಸಾಹಿತ್ಯದ ಭಾಗವತ ಕವಿಗಳು – ಬಿ. ಎಸ್. ವೇಣುಗೋಪಾಲ್

೬೪. ಕುಮಾರ ವಾಲ್ಮೀಕಿ – ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯ

೬೫. ಕವಿರಾಜ ಮಾರ್ಗ – ಸೀತಾರಾಮ ಜಾಗೀರ್‌ದಾರ್

೬೬. ಪಾರ್ಶ್ವ ಪಾಂಡಿತ – ಬಿ. ನಂ. ಚಂದ್ರಯ್ಯ

೬೭. ವೃತ್ತವಿಲಾಸ – ಡಾ. ಕೆ. ರಾಘವೇಂದ್ರರಾವ್

೬೮. ಅಗ್ಗಳದೇವ – ಎಚ್. ಎನ್. ಕೃಷ್ಣಾಜೋಯಿಸ್

೬೯. ಕನಕದಾಸ – ಮಳಲಿ ವಸಂತಕುಮಾರ್

೭೦. ಶ್ರೀಪಾದರಾಜರು – ಡಾ. ಟಿ. ಎನ್. ನಾಗರತ್ನ

೭೧. ಸಿದ್ಧರಾಮ – ಡಾ. ಎಂ. ರಾಮಕೃಷ್ಣ

೭೨. ರನ್ನ – ಡಾ. ಸಿ. ಪಿ. ಕೃಷ್ಣಕುಮಾರ್

೭೩. ಕನ್ನಡ ಕವಿಗಳು ಕಂಡ ಕ್ರೀಡೆಗಳು – ಡಾ. ಕೆ. ಶ್ರೀಕಂಠಯ್ಯ

೭೪. ಅಪರಾಧ ಪರಿಚಯ – ಆನಂದಮೂರ್ತಿ ಮಲಾಕಿ

೭೫. ಹೆಳವನಕಟ್ಟೆ ಗಿರಿಯಮ್ಮ – ನಗುವನಹಳ್ಳಿ ರತ್ನ ನಾಗರಾಜ್

೭೬. ಯಜುರ್ವೇದ – ಸಿ. ಜಿ. ಪುರುಷೋತ್ತಮ

೭೭. ಎಂ. ಆರ್. ಶ್ರೀ : ಬದುಕು – ಬರಹ – ಡಾ. ನಗುವನಹಳ್ಳಿ ಪಿ. ರತ್ನ

೭೮. ಶ್ರೀ ವಿಜಯದಾಸರು – ಡಾ. ಎನ್. ಕೆ. ರಾಮಶೇಷನ್

೭೯. ಅಸ್ವಸ್ಥ ಮನಸ್ಸು – ಡಾ. ಸಿ. ಆರ್. ಚಂದ್ರಶೇಖರ್

೮೦. ದಿಗಂಬರ ಕವಿಗಳು – ಡಾ. ಆರ್. ವಿ. ಎಸ್. ಸುಂದರಂ

೮೧. ನಿಮ್ಮ ಮಗು – ಡಾ. ಎಂ. ವಿ. ನರಸಿಂಹಯ್ಯ

೮೨. ಫ್ರೀಲಾನ್ಸ್ ಪತ್ರಿಕೋದ್ಯಮ – ನಿರಂಜನ ವಾನಳ್ಳಿ

೮೩. ಸುಮಿತ್ರಾನಂದನ್ ಪಂತ್ – ಡಾ. ತಿಪ್ಪೇಸ್ವಾಮಿ

೮೪. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಜಾನಪದ – ಡಾ. ವೈ. ಸಿ. ಭಾನುಮತಿ

೮೫. ಜನಪದ ಸಾಹಿತ್ಯದಲ್ಲಿ ಹಾಸ್ಯ – ಡಾ. ಜಯಲಕ್ಷ್ಮೀ ಸೀತಾಪುರ

೮೬. ಅನ್ನಮಾಚಾರ್ಯರು – ಡಾ. ಅಕ್ಕ ಮಹಾದೇವಿ

೮೭. ಆಚಾರ್ಯ ಶ್ರೀ ಶಂಕರ – ಡಾ. ಟಿ. ಬಿ. ಬಸವರಾಜು

೮೮. ಆಚಾರ್ಯ ಶ್ರೀ ರಾಮಾನುಜ – ಡಾ. ಟಿ. ಬಿ. ಬಸವರಾಜು